ಮೂ॥ ಪ್ರಾಪ್ತಭೂಯಿಷ್ಠಪಾರಸ್ತು ಸರ್ವತಃಪ್ರತಿಲೋಕಯನ್ ।
ಯೋಜನಾನಾಂ ಶತಸ್ಯಾಂತೇ ವನರಾಜಿಂದದರ್ಶಸಃ ॥೨೦೯॥
ದದರ್ಶಚಪತನ್ನೇವ ವಿವಿಧದ್ರುಮಭೂಷಿತಮ್ ।
ದ್ವೀಪಂಶಾಖಾಮೃಗಶ್ರೇಷ್ಠೋ ಮಲಯೋಪವನಾನಿಚ ॥೨೧೦॥

ಪದಚ್ಛೇದ

ಪ್ರಾಪ್ತಭೂಯಿಷ್ಠಪಾರಃ, ತು, ಸರ್ವತಃ, ಪ್ರತಿ ಲೋಕಯನ್, ಯೋಜನಾನಾಂ, ಶತಸ್ಯ, ಅಂತೇ ವನರಾಜಿಂ, ದದರ್ಶ, ಸಃ ॥೨೦೯॥

ದದರ್ಶ, ಚ, ಪತನ್, ಏವ, ವಿವಿಧದ್ರುಮಭೂಷಿತಮ್, ದ್ವೀಪಂ, ಶಾಖಾಮೃಗಶ್ರೇಷ್ಠಃ, ಮಲಯೋಪವನಾನಿ, ಚ, ॥೨೧೦

ಅನ್ವಯ

ಸಃ, ಪ್ರಾಪ್ತಭೂಯಿಷ್ಠಪಾರಃ, ಸರ್ವತಃ ಪ್ರತಿ ಲೋಕಯನ್ ಯೋಜನಾನಾಂ ಶತಸ್ಯ ಅಂತೇ, ವನರಾಜಿಂ, ದದರ್ಶ ॥೨೦೯॥

ಶಾಖಾಮೃಗಶ್ರೇಷ್ಠಃ ಪತನ್ನೇವ, ವಿವಿಧದ್ರುಮಭೂಷಿತಮ್, ದ್ವೀಪಂ, ಮಲಯೋಪವನಾನಿ ಚ, ದದರ್ಶ ॥೨೧೦॥

ಸಃ-ಆಮಾರುತಿಯು, ಪ್ರಾಪ್ತಭೂಯಿಷ್ಠಪಾರಃ-ಪ್ರಾಪ್ತ-ತಡೆಯಲ್ಪಟ್ಟ, ಭೂಯಿಷ್ಠ-ಬಹುಲತರವಾದ, ಪಾರಃ-ದಕ್ಷಿಣೋದಧಿಯ ದಡವುಳ್ಳವನಾಗಿ, ಸರ್ವತಃ-ಯುಲ್ಲಾಕಡೆಯಲ್ಲೂ, ಪ್ರತಿಲೋಕಯನ್-ನೋಡುತ್ತಾ, ಯೋಜನಾನಾಂ ಶತಸ್ಯ-ನೂರುಯೋಜನಗಳ, ಅಂತೆ-ಕೊನೆಯಲ್ಲಿ, ವನರಾಜಿಂ-ವನಪಙ್ತಿಯನ್ನು, ದದರ್ಶ-ನೋಡಿದನು ॥೨೦೯॥

ಶಾಖಾಮೃಗಶ್ರೇಷ್ಠಃ-ಕಪಿಶ್ರೇಷ್ಠನಾದ ಮಾರುತಿಯು, ಪತನ್ನೇವ-ದಕ್ಷಿಣತೀರಕ್ಕೆಬೀಳುತ್ತಲೇ, ವಿವಿಧದ್ರುಮಭೂಷಿತಮ್-ನಾನಾವೃಕ್ಷಗಳಿಂದ ವಿಭೂಷಿತವಾದ, ದ್ವೀಪಂ-ಲಂಕಾದ್ವೀಪವನ್ನು, ಮಲಯೋಪವನಾನಿಚ-ಮಲಯಪರ್ವತದ ಉಪವನಗಳನ್ನುಕೂಡ, ದದರ್ಶ-ನೋಡಿದನು ॥೨೧೦॥

ಎಲೈ ಕಪಿವೃಷನೇ, ನೀನು ಧೈರ್ಯಶಾಲಿಯಾಗಿಯೂ ಸೂಕ್ಷ್ಮದರ್ಶನವುಳ್ಳವನಾಗಿಯೂ, ವಿವೇಕಯುಕ್ತವಾದ ಬುದ್ಧಿಯುಳ್ಳವನಾಗಿಯೂ, ಕಾರ್ಯಸಮರ್ಥನಾಗಿಯೂ ಇರುವಕಾರಣ ಸಿಂಹಿಕಾ ಸಂಹಾರರೂಪವಾದ ಕಾರ್ಯವನ್ನು ಸಾಧಿಸಿರುವನಾಗಿದ್ದೀಯೆ, ಮತ್ತು ನಿನ್ನಂತೆಯಾರಿಗೆ ಈ ಸುಗುಣಗಳು ಇರುತ್ತೆಯೋ ಅವರು ತಮ್ಮ ಕಾರ್ಯಸಾಧನೆಯಲ್ಲಿ ಭಂಗಹೊಂದಲಾರರು॥೨೦೭॥

ಈ ರೀತಿಯಲ್ಲಿ ಆ ಮಾರುತಿಯು ತನ್ನಕಾರ್ಯಕ್ಕೆ ಮಾರ್ಗದಲ್ಲಿ ಪರಿಪಂಥಿಯಾಗಿ ಬಂದಿದ್ದ ಸಿಂಹಿಕೆಯನ್ನು ಸಂಹರಿಸಿ ವಿಘ್ನವನ್ನು ನಿವಾರಣೆಮಾಡಿಕೊಂಡು ಪುನಃ ಆಕಾಶಮಾರ್ಗವನ್ನು ಪ್ರವೇಶಮಾಡಿ ಗರುಡನಂತೆ ಅತಿವೇಗದಿಂದ ಹಾರುವವನಾದನು॥೨೦೮॥

ಅತಿ ವೇಗದಿಂದ ಗಗನಮಾರ್ಗದಲ್ಲಿ ರಾವಣ ರಾಜಧಾನಿಯು ನೆಲೆಗೊಂಡಿರುವ ಲಂಕಾ ದ್ವೀಪದಕಡೆಗೆ ಹಾರಿಬರುತ್ತಾ ದಕ್ಷಿಣಮಹೋದಧಿಯ ದಕ್ಷಿಣತೀರದ ಸಮೀಪಕ್ಕೆ ಬರುತ್ತಾ ನಾನಾಕಡೆಯಲ್ಲೂ ದೃಷ್ಟಿಪ್ರಸಾರಮಾಡುತ್ತಾ ನೂರುಯೋಜನ ವಿಸ್ತಾರವುಳ್ಳ

Funding: Tattva Heritage and IKS-MoE. Digitization: eGangotri.



ಮೂ॥ ಸಾಗರಂಸಾಗರಾನೂಪಂ ಸಾಗರಾನೂಪಜಾನ್ದ್ರುಮಾನ್ ।
ಸಾಗರಸ್ಯಚಪತ್ನೀನಾಂ ಮುಖಾನ್ಯಪಿವಿಲೋಕಯನ್ ॥
ಸಮಹಾಮೇಘಸಂಕಾಶಂ ಸಮೀಕ್ಷ್ಯಾತ್ಮಾನಮಾತ್ಮವಾನ್ ।
ನಿರುಂಧಂತಮಿವಾಕಾಶಂ ಚಕಾರಮತಿಮಾನ್ಮತಿಂ ॥೨೧೧-೨೧೨॥

| ಪದಚ್ಛೇದ | ಅನ್ವಯ |
| --- | --- |
| ಸಾಗರಂ, ಸಾಗರಾನೂಪಂ, ಸಾಗರಾನೂಪಜಾನ್, ದ್ರುಮಾನ್, ಸಾಗರಸ್ಯ, ಚ, ಪತ್ನೀನಾಂ, ಮುಖಾನಿ, ಅಪಿ, ವಿಲೋಕಯನ್, ಸಃ, ಮಹಾಮೇಘಸಂಕಾಶಂ, ಸಮೀಕ್ಷ್ಯ, ಆತ್ಮಾನಂ, ಆತ್ಮವಾನ್, ನಿರುಂಧಂತಂ, ಇವ, ಆಕಾಶಂ, ಚಕಾರ, ಮತಿಮಾನ್, ಮತಿಂ ॥೨೧೧-೨೧೨॥ | ಆತ್ಮವಾನ್, ಮತಿಮಾನ್, ಸಃ, ಸಾಗರಂ, ಸಾಗರಾನೂಪಂ, ಸಾಗರಾನೂಪಜಾನ್ ದ್ರುಮಾನ್, ಸಾಗರಸ್ಯ ಪತ್ನೀನಾಂ, ಮುಖಾನ್ಯಪಿ ವಿಲೋಕಯನ್, ಮಹಾಮೇಘಸಂಕಾಶಂ, ಆಕಾಶಂ ನಿರುಂಧಂತಮಿವಸ್ಥಿತಂ, ಆತ್ಮಾನಂ ಸಮೀಕ್ಷ್ಯ, ಮತಿಂಚಕಾರ ॥೨೧೧-೨೧೨॥ |

ಆತ್ಮವಾನ್-ಧೈರ್ಯಶಾಲಿಯಾದ, ಮತಿಮಾನ್-ಬುದ್ಧಿವಂತನಾದ, ಸಃ-ಆಮಾರುತಿಯು, ಸಾಗರಂ-ಸಮುದ್ರವನ್ನು, ಸಾಗರಾನೂಪಂ-ಆಳವಾದನೀರುಳ್ಳ ಸಮುದ್ರಪ್ರಾಂತವನ್ನು, ಸಾಗರಾನೂಪಜಾನ್-ಜಲಪ್ರಾಯಭೂಮಿಯಲ್ಲಿಹುಟ್ಟಿದ, ದ್ರುಮಾನ್-ವೃಕ್ಷಗಳನ್ನು, ಸಾಗರಸ್ಯ-ಸಮುದ್ರಕ್ಕೆ, ಪತ್ನೀನಾಂ-ಹೆಂಡತಿಗಳಾದಮಹಾನದಿಗಳ, ಮುಖಾನ್ಯಪಿ-ಸಮುದ್ರಸಂಗಮಸ್ಥಾನಗಳನ್ನುಕೂಡ, ವಿಲೋಕಯನ್-ನೋಡುತ್ತಲಿರುವವನಾಗಿ, ಮಹಾಮೇಘಸಂಕಾಶಂ, ದೊಡ್ಡಮೇಘಕ್ಕೆ ಸದೃಶವಾಗಿ, ಆಕಾಶಂ-ಅಂತರಿಕ್ಷವನ್ನು, ನಿರುಂಧಂತಮಿವಸ್ಥಿತಂ-ತಡೆಮಾಡುತ್ತಿರುವ, ಆತ್ಮಾನಂ-ತನ್ನ ಶರೀರವನ್ನು, ಸಮೀಕ್ಷ್ಯ-ನೋಡಿ, ಮತಿಂ-ಬುದ್ಧಿಯನ್ನು, ಚಕಾರ-ಮಾಡಿದನು ॥೨೧೧॥-॥೨೧೨

ಮಾರ್ಗವನ್ನು ಉಲ್ಲಂಘಿಸಿದ ತರುವಾಯ ಆ ಮಾರುತಿಯು ಒಂದಾನೊಂದು ನೇತ್ರಾನಂದಕರವಾದ ವನಪಙ್ಕ್ತಿಯನ್ನು ಕಾಣುವವನಾದನು ॥೨೦೯॥

ಕಪಿಕುಲಾಗ್ರಣಿಯಾದ ಆ ಮಾರುತಿಯು ದಕ್ಷಿಣತೀರಕ್ಕೆ ಪ್ರವೇಶ ಮಾಡಿದ ಕೂಡಲೇ ವಿಚಿತ್ರವನೋಪವನಗಳಿಂದ ಪರಿಶೋಭಿತವಾದ ಲಂಕಾದ್ವೀಪವನ್ನು ಮಲಯಾಚಲದ ಉಪವನ ಪರಂಪರೆಗಳನ್ನು ನೋಡಿದವನಾದನು ॥೨೧೦॥

ಧೈರ್ಯಶಾಲಿಗಳಲ್ಲಿ ಅಗ್ರಗಣ್ಯನಾಗಿಯೂ, ಸೂಕ್ಷ್ಮಬುದ್ಧಿಯುಳ್ಳ ವಿವೇಕಿಗಳಲ್ಲಿ ಪ್ರಥಮನಾಗಿಯೂ, ಇರುವ ಆ ಮಾರುತಿಯು ಆ ದಕ್ಷಿಣಮಹೋದಧಿಯ ಪಾರಕ್ಕೆ ಹೋಗಿ ಆ ಪ್ರಾಂತದಲ್ಲಿ ಗಂಭೀರಗಳಾದ ಮಡುಗಳನ್ನು, ದೊಡ್ಡದೊಡ್ಡ ಜಲಪ್ರಾಂತಭೂಮಿಗಳನ್ನು, ಸಮುದ್ರತೀರದಲ್ಲಿ ಸಾಲು ಸಾಲಾಗಿ ಬೆಳದಿರುವ ವೃಕ್ಷಪಙ್ಕ್ತಿಗಳನ್ನು ಸಮುದ್ರಕ್ಕೆ ಬಂದು ತಂಡೋಪತಂಡವಾಗಿ ಬೀಳುತ್ತಲಿರುವ ಮಹಾನದಿಗಳನ್ನೂ ಅವಲೋಕಿಸುತ್ತಾ ಆನಂದವನ್ನು ಅನುಭವಿಸುವನಾಗಿ, ತಾನು ಇವುಗಳಸಮೀಪದಲ್ಲಿ, ಆಕಾಶಮಂಡಲದಲ್ಲಿ ಮಹಾ ಮೇಘದಂತೆ ದೊಡ್ಡ ಪ್ರದೇಶವನ್ನು ಆಕ್ರಮಿಸಿಕೊಂಡಿರುವಾಗ್ಯೆ ಈ ಸನ್ನಿವೇಶವನ್ನೆಲ್ಲಾ ಮನಸ್ಸಿಗೆ ತಂದುಕೊಂಡು ಈ ರೀತಿಯಲ್ಲಿ ಯೋಚಿಸುವನಾದನು ॥೨೧೧॥೨೧೨॥

ಮೂ ॥ ಕಾಯವೃದ್ಧಿಂಪ್ರವೇಗಂಚ ಮಮದೃಷ್ಟ್ವೈವರಾಕ್ಷಸಾಃ ।
ಮಯಿಕೌತೂಹಲಂ ಕುರ್ಯುರಿತಿಮೇನೇಮಹಾಕಪಿಃ ॥೨೧೩॥
ತತಶ್ಶರೀರಂಸಂಕ್ಷಿಪ್ಯ ತನ್ಮಹೀಧರಸನ್ನಿಭಂ ।
ಪುನಃಪ್ರಕೃತಿಮಾಪೇದೇವೀತಮೋಹಇವಾತ್ಮವಾನ್ ॥೨೧೪॥

**ಪದಚ್ಛೇದ**

ಕಾಯವೃದ್ಧಿಂ, ಪ್ರವೇಗಂ, ಚ, ಮಮ, ದೃಷ್ಟ್ವಾ, ಏವ, ರಾಕ್ಷಸಾಃ, ಮಯಿ, ಕೌತೂಹಲಂ, ಕುರ್ಯುಃ, ಇತಿ, ಮೇನೇ, ಮಹಾಕಪಿಃ ॥೨೧೩

ತತಃ, ಶರೀರಂ, ಸಂಕ್ಷಿಪ್ಯ, ತತ್, ಮಹೀಧರಸನ್ನಿಭಂ, ಪುನಃ, ಪ್ರಕೃತಿಂ, ಆಪೇದೇ, ವೀತಮೋಹಃ, ಇವ, ಆತ್ಮವಾನ್ ॥೨೧೪॥

**ಅನ್ವಯ**

ಮಮ ಕಾಯವೃದ್ಧಿಂ, ಪ್ರವೇಗಂ ಚ ದೃಷ್ಟ್ವೈವ, ರಾಕ್ಷಸಾಃ, ಮಯಿ, ಕೌತೂಹಲಂ ಕುರ್ಯುಃ ಇತಿ ಮಹಾಕಪಿಃ ಮೇನೇ ॥೨೧೩

ತತಃ ಮಹೀಧರಸನ್ನಿಭಂ, ಶರೀರಂ ಸಂಕ್ಷಿಪ್ಯ ವೀತಮೋಹಃ, ಆತ್ಮವಾನಿವ ಪುನಃ ಪ್ರಕೃತಿಂ ಆಪೇದೇ, ॥೨೧೪॥

ಮಮ-ತನ್ನ, ಕಾಯವೃದ್ಧಿಂ-ಶರೀರದ ಬೆಳವಳಿಗೆಯನ್ನು, ಪ್ರವೇಗಂಚ-ಪ್ರಬಲವೇಗವನ್ನು, ದೃಷ್ಟ್ವೈವ-ನೋಡಿದಮಾತ್ರಕ್ಕೆ, ರಾಕ್ಷಸಾಃ-ರಾಕ್ಷಸರು, ಮಯಿ-ನನಲ್ಲಿ, ಕೌತೂಹಲಂ-ಕೌತುಕವನ್ನು, ಕುರ್ಯುಃ-ಮಾಡ್ಯಾರು, ಇತಿ-ಹೀಗೆಂದು, ಮಹಾಕಪಿಃ-ಆಮಾರುತಿಯು ಮೇನೇ-ತಿಳಿಯುವನಾದನು ॥೨೧೩॥

ತತಃ-ಅನಂತರದಲ್ಲಿ, ಮಹೀಧರ-ಪರ್ವತಕ್ಕೆ, ಸನ್ನಿಭಂ-ಸದೃಶವಾದ, ಶರೀರಂ-ದೇಹವನ್ನು, ಸಂಕ್ಷಿಪ್ಯ-ಸಂಕೋಚವಮಾಡಿಕೊಂಡು, ಸಃ-ಆಮಾರುತಿಯು ವೀತಮೋಹಃ-ಹೋಗಲಾಡಿಸಲ್ಪಟ್ಟ ಅಜ್ಞಾನವುಳ್ಳ, ಆತ್ಮವಾನಿವಾ ಬ್ರಹ್ಮಜ್ಞಾನಿಯಂತೆ, ಪುನಃ-ಮತ್ತು, ಪ್ರಕೃತಿಂ-ನಿಜಸ್ವಭಾವವನ್ನು, ಆಪೇದೇ-ಹೊಂದಿದನು ॥೨೧೪॥

ತನ್ನ ಅತ್ಯುದ್ದಂಡ ದೇಹದಂಡವನ್ನು, ಪ್ರಚಂಡ ಮಾರುತದಂತಿರುವ ಮಹಾವೇಗವನ್ನು ಕಂಡಕೂಡಲೆ ರಾಕ್ಷಸರಿಗೆ ನನ್ನನ್ನು ನೋಡಬೇಕೆಂಬ ಕುತೂಹಲವುಂಟಾಗಿ ತಮ್ಮಷ್ಟಕ್ಕೆ ತಾವೇನೇ ನನ್ನ ಸಮೀಪಕ್ಕೆ ಬರುವರೆಂದು ಯೋಚಿಸಿದನು ॥೨೧೩॥

ಈ ಪರಿಯಲ್ಲಿ ಯೋಚನೆಮಾಡಿದಮೇಲೆ ಆ ಮಾರುತಿಯು ಬೆಟ್ಟದಂತೆ ಬೆಳದಿರುವ ತನ್ನ ಶರೀರವನ್ನು ಮತ್ತೆ ಸಣ್ಣದಾಗಿ ಮಾಡಿಕೊಂಡಾಗ ಜಿತೇಂದ್ರಿಯನಾದ ಬ್ರಹ್ಮಜ್ಞಾನಿಯು ಅಜ್ಞಾನನಿವೃತ್ತಿಯಾದನಂತರ ಯಾವರೀತಿಯಲ್ಲಿ ಸ್ವಸ್ವರೂಪಾನುಸಂಧಾನವನ್ನು ಹೊಂದುತ್ತಾನೆಯೋ ಆ ರೀತಿಯಲ್ಲಿ ಕಾಣುವನಾದನು ॥೨೧೪॥

ಮೂ ॥ ತದ್ರೂಪಮತಿಸಂಕ್ಷಿಪ್ಯ ಹನುಮಾನ್ಪ್ರಕೃತೌಸ್ಥಿತಃ ।
ತ್ರೀನ್ಕ್ರಮಾನಿವವಿಕ್ರಮ್ಯಬಲಿವೀರ್ಯಹರೋಹರಿಃ ।೨೧೫॥
ಸಚಾರುನಾನಾವಿಧರೂಪಧಾರೀ ಪರಂಸಮಾಸಾದ್ಯ ಸಮುದ್ರತೀರಂ।
ಪರೈರಶಕ್ಯಃಪ್ರತಿಪನ್ನರೂಪಃ ಸಮೀಕ್ಷಿತಾತ್ಮಾ ಸಮವೇಕ್ಷಿತಾರ್ಥಃ

| ಪದಚ್ಛೇದ | ಅನ್ವಯ |
|---|---|
| ತದ್ರೂಪಂ, ಅತಿಸಂಕ್ಷಿಪ್ಯ, ಹನುಮಾನ್, ಪ್ರಕೃತೌ, ಸ್ಥಿತಃ, ತ್ರೀನ್, ಕ್ರಮಾನ್, ಇವ, ವಿಕ್ರಮ್ಯ, ಬಲವೀರ್ಯಹರಃ, ಹರಿಃ ॥೨೧೫॥ | ಹನುಮಾನ್, ತದ್ರೂಪಂ, ಅತಿಸಂಕ್ಷಿಪ್ಯ, ತ್ರೀನ್ ಕ್ರಮಾನ್, ವಿಕ್ರಮ್ಯ, ಬಲಿವೀರ್ಯಹರಃ ಹರಿರಿವ, ಪ್ರಕೃತೌಸ್ಥಿತಃ ॥೨೧೫॥ |
| ಸಃ, ಚಾರುನಾನಾವಿಧರೂಪಧಾರೀ, ಪರಂಸಮಾಸಾದ್ಯ, ಸಮುದ್ರತೀರಂ, ಪರೈಃ, ಅಶಕ್ಯಃ ಪ್ರತಿಪನ್ನರೂಪಃ, ಸಮೀಕ್ಷಿತಾತ್ಮಾ, ಸಮವೇಕ್ಷಿತಾರ್ಥಃ ॥೨೧೬॥ | ಚಾರುನಾನಾವಿಧರೂಪಧಾರೀ, ಪರೈಃ ಅಶಕ್ಯಃ, ಸಃ, ಪರಂ ಸಮುದ್ರತೀರಂ ಅಸಾದ್ಯ, ಸಮೀಕ್ಷಿತಾತ್ಮಾ, ಸಮವೇಕ್ಷಿತಾರ್ಥಃ ಪ್ರತಿಪನ್ನರೂಪಃ, ಅಭೂತ್ ॥೨೧೬॥ |

ಹನುಮಾನ್-ಆ ಮಾರುತಿಯು, ತದ್ರೂಪಂ-ಆ ಪರ್ವತಾಕಾರವನ್ನು, ಅತಿಸಂಕ್ಷಿಪ್ಯ-ಬಹಳ ಸಂಕೋಚಮಾಡಿ, ತ್ರೀನ್ಕ್ರಮಾನ್-ಮೂರುಪಾದ ಹೆಜ್ಜೆಗಳನ್ನು, ವಿಕ್ರಮ್ಯ-ನಿಡಿಸಿ, ಬಲಿವೀರ್ಯಹರಃ-ಬಲಿಚಕ್ರವರ್ತಿಯಶಕ್ತಿಯನ್ನು ಅಪಹರಿಸಿದ, ಹರಿರಿವ-ವಿಷ್ಣುವಿನೋಪಾದಿಯಲ್ಲಿ, ಪ್ರಕೃತೌ-ನಿಜಸ್ವಭಾವದಲ್ಲಿ ಸ್ಥಿತಃ-ನಿಂತನು ॥೨೧೫॥

ಚಾರು-ಮನೋಹರವಾದ, ನಾನಾವಿಧ-ಸ್ಥೂಲವಾಗಿಯೂ ಸೂಕ್ಷ್ಮವಾಗಿಯೂ ನಾನಾಬಗೆಯಾದ, ರೂಪ-ಆಕೃತಿಯನ್ನು ಧಾರೀ-ಧರಿಸುವದಕ್ಕೆ ಶಕ್ತಿಯುಳ್ಳ, ಪರೈಃ- ಶತ್ರುಗಳಿಂದ, ಅಶಕ್ಯಃ-ತಿರಸ್ಕಾರಿಸಲಶಕ್ಯನಾದ, ಸಃ-ಆ ಮಾರುತಿಯು, ಪರಂ ಸಮುದ್ರತೀರಂ-ಆಚೇಯಿರುವಸಮುದ್ರದಡವನ್ನು, ಅಸಾದ್ಯ-ಹೊಂದಿ, ಸಮೀಕ್ಷಿತಾತ್ಮಾ-ಸಮೀಕ್ಷಿತ-ನೋಡಲ್ಪಟ್ಟ, ಆತ್ಮಾ-ಶರೀರವುಳ್ಳವನಾದ್ದರಿಂದಲೇ, ಸಮವೇಕ್ಷಿತಾರ್ಥಃ-ಸಮವೇಕ್ಷಿತ-ಆಲೋಚಿಸಲ್ಪಟ್ಟ, ಅರ್ಥಃ-ಕಾರ್ಯವುಳ್ಳವನಾಗಿ, ಪ್ರತಿಪನ್ನರೂಪಃ-ಅನುರೂಪವಾದ ಆಕೃತಿಯುಳ್ಳವನಾಗಿ, ಅಭೂತ್-ಆದನು ॥೨೧೬॥

ಪರ್ವತಾಕೃತಿಯಂತೆ ಬೆಳದಿದ್ದ ಆ ಮಾರುತಿಯು ತನ್ನ ಶರೀರ ಪ್ರಮಾಣವನ್ನು ಸಣ್ಣದನ್ನಾಗಿಮಾಡಿಕೊಂಡು ತ್ರಿವಿಕ್ರಮಾವತಾರದಲ್ಲಿ ವಾಮನಮೂರ್ತಿಯು ಭೂಮಿ ಸ್ವರ್ಗಬಲಿಶಿರಸ್ಸುಗಳಲ್ಲಿ ಮೂರುಹೆಜ್ಜೆಗಳನ್ನಿಟ್ಟು ಅನಂತರ ತನ್ನ ವಾಮನರೂಪವನ್ನು ಧರಿಸಿದಂತೆ, ಮೂರುಹೆಜ್ಜೆಗಳನ್ನಿಟ್ಟು ಅನಂತರ ನಿಜವಾದ ರೂಪವನ್ನು ಧರಿಸುವನಾದನು॥೨೧೫॥

ಅಷ್ಟು ವಿಭೂತಿಯುಕ್ತನಾದ್ದರಿಂದಲೆ ಸೂಕ್ಷ್ಮವನ್ನಾಗಿಯೂ, ಕದಾಚಿತ್ ಸ್ಥೂಲವನ್ನಾಗಿಯೂ ತನ್ನಶರೀರವನ್ನು ನಾನಾವಿಧವಾಗಿ ಮಾಡಿಕೊಳ್ಳುವದಕ್ಕೆ ಸಮರ್ಥನಾದ ಆ ಮಾರುತಿಯು ದಕ್ಷಿಣಮಹೋದಧಿಯ ಆಚೆಯ ದಡವನ್ನು ಹೊಂದಿ ಮುಂದೆಯಾವಸ್ಥೂ

ಮೂ ॥ ತತಸ್ಸಲಂಬಸ್ಯಗಿರೇಸ್ಸಮೃದ್ಧೇ ವಿಚಿತ್ರಕೂಟೇನಿಪಪಾತಕೂಟೇ ।
ಸಕೇತಕೋದ್ದಾಲಕನಾಲಿಕೇರೇಮಹಾದ್ರಿಕೂಟಪ್ರತಿಮೋಮಹಾತ್ಮಾ ॥
ತತಸ್ತುಸಂಪ್ರಾಪ್ಯ ಸಮುದ್ರತೀರಂಸಮೀಕ್ಷ್ಯ ಲಂಕಾಂಗಿರಿವರ್ಯ
ಮೂರ್ಧ್ನಿ । ಕಪಿಸ್ತುತಸ್ಮಿನ್ನಿಪಪಾತಪರ್ವತೇ ವಿಧೂಯರೂಪಂ ವ್ಯ
ಥಯನ್ಮೃಗದ್ವಿಜಾನ್ ॥೨೧೮॥

**ಪದಚ್ಛೇದ**

ತತಃ, ಸಃ, ಲಂಬಸ್ಯ, ಗಿರೇಃ, ಸಮೃದ್ಧೇ, ವಿಚಿತ್ರಕೂಟೇ, ನಿಪಪಾತ, ಕೂಟೇ, ಸಕೇತಕೋದ್ದಾಲಕನಾಲಿಕೇರೇ, ಮಹಾದ್ರಿಕೂಟಪ್ರತಿಮಃ, ಮಹಾತ್ಮಾ ॥೨೧೭॥

ತತಃ, ತು, ಸಂಪ್ರಾಪ್ಯ, ಸಮುದ್ರತೀರಂ, ಸಮೀಕ್ಷ್ಯ, ಲಂಕಾಂ, ಗಿರಿವರ್ಯಮೂರ್ಧ್ನಿ, ಕಪಿಃ ತು ತಸ್ಮಿನ್, ನಿಪಪಾತ, ಪರ್ವತೇ, ವಿಧೂಯ, ರೂಪಂ, ವ್ಯಥಯನ್, ಮೃಗದ್ವಿಜಾನ್ ॥೨೧೮॥

**ಅನ್ವಯ**

ತತಃ, ಮಹಾದ್ರಿಕೂಟಪ್ರತಿಮಃ, ಮಹಾತ್ಮಾಸಃ, ಸಕೇತಕೋದ್ದಾಲಕನಾಲಿಕೇರ, ವಿಚಿತ್ರಕೂಟೇ, ಲಂಬಸ್ಯ ಗಿರೇಃ ಸಮೃದ್ಧೇ ಕೂಟೇ, ನಿಪಪಾತ ॥೨೧೭॥

ತತಸ್ತು, ಕಪಿಃ, ಸಮುದ್ರತೀರಂ ಸಂಪ್ರಾಪ್ಯ ಗಿರಿವರ್ಯಮೂರ್ಧ್ನಿ, ಲಂಕಾಂ ಸಮೀಕ್ಷ್ಯ, ರೂಪಂ ವಿಧೂಯ, ಮೃಗದ್ವಿಜಾನ್ ವ್ಯಥಯನ್, ತಸ್ಮಿನ್ಪರ್ವತೇ ನಿಪಪಾತ ॥೨೧೮॥

ತತಃ-ಅನಂತರದಲ್ಲಿ, ಮಹಾದ್ರಿಕೂಟಪ್ರತಿಮಃ-ಮಹಾದ್ರಿ-ದೊಡ್ಡಪರ್ವತದ, ಕೂಟ-ಶಿಖರಕ್ಕೆ, ಪ್ರತಿಮಃ-ಸಮಾನನಾದ, ಮಹಾತ್ಮಾ-ಮಹಾನುಭಾವನಾದ, ಸಃ-ಆ ಮಾರುತಿಯು, ಸಕೇತಕೋದ್ದಾಲಕನಾಲಿಕೇರ-ತಾಳೇಗಿಡಗಳಿಂದಲೂ, ಚಳ್ಳೇಗಿಡಗಳಿಂಲೂ, ತೆಂಗಿನಗಿಡಗಳಿಂಲೂ ಕೂಡಿರುವ, ವಿಚಿತ್ರಕೂಟೇ-ಆಶ್ಚರ್ಯಕರಗಳಾದ ಶೃಂಗಗಳುಳ್ಳ, ಲಂಬಸ್ಯ ಗಿರೇಃ-ಲಂಬನಾಮಧೇಯಾಕವಾದ ಪರ್ವತದ, ಸಮೃದ್ಧೇ-ಎತ್ತರವಾದ, ಕೂಟೇ- ಶೃಂಗದಲ್ಲಿ, ನಿಪಪಾತ-ಇಳಿಯುವನಾದನು ॥೨೧೭॥

ತತಸ್ತು, ಅನಂತರದಲಾದರೋ, ಕಪಿಃ-ಆಂಜನೇಯನು, ಸಮುದ್ರತೀರಂ-ದಕ್ಷಿಣಮಹೋದಧಿಯದಡವನ್ನು, ಸಂಪ್ರಾಪ್ಯ-ಹೊಂದಿ, ಗಿರಿವರ್ಯಮೂರ್ಧ್ನಿ-ತ್ರಿಕೂಟಾಚಲದ ಶಿಖರಭಾಗದಲ್ಲಿರುವ, ಲಂಕಾಂ-ಲಂಕಾಪಟ್ಟಣವನ್ನು, ಸಮೀಕ್ಷ್ಯ-ಚನ್ನಾಗಿನೋಡಿ, ರೂಪಂ-ತನ್ನಪೂರ್ವರೂಪವನ್ನು, ವಿಧೂಯ-ಕೊಡವಿ, ಮೃಗದ್ವಿಜಾನ್-ಮೃಗಪಕ್ಷಿಗಳನ್ನು, ವ್ಯಥಯನ್-ವ್ಯಥೆಪಡುತ್ತಿರುವನಾಗಿ, ತಸ್ಮಿನ್ ಪರ್ವತೇ-ಅದೇಪರ್ವತದಲ್ಲಿ, ನಿಪಪಾತ-ಧುಮಿಕಿದನು ॥೨೧೮॥

ಪದಿಂದ ಆ ಲಂಕಾದ್ವೀಪದಲ್ಲಿ ಸಂಚಾರಮಾಡುವದು ಅನುಕೂಲವೆಂಬ ಅರ್ಥವನ್ನು ಚನ್ನಾಗಿಪರ್ಯಾಲೋಚನೆಗೆ ತಂದುಕೊಂಡು, ಇದುವರಿವಿಗೆ ಅತಿಬೃಹತ್ತಾದ ತನ್ನಕಾಯವನ್ನು ಸುಲಭವಾಗಿ ಸಂಚರಿಸುವದಕ್ಕೆ, ಅನುಕೂಲವಾಗಿರುವಂತೆ ಲಘುವಾದ ಸ್ಥಿತಿಗೆ ತಂದುಕೊಂಡನು ॥೨೧೯॥

ಅನಂತರದಲ್ಲಿ ಆ ಬೃಹತ್ಕಾಯನಾದ ಮಾರುತಿಯು ನಾನಾವಿಧಗಳಾದ ವೃಕ್ಷಗಳಿಂ

ಮೂ॥ ಸ ಸಾಗರಂದಾನವಪನ್ನಗಾಯುತಂಬಲೇನ ವಿಕ್ರಮ್ಯ ಮಹೋರ್ಮಿ
ಮಾಲಿನಂ । ನಿಪತ್ಯತೀರೇಚಮಹೋದಧೇಸ್ತದಾ ದದರ್ಶಲಂಕಾಮಮ
ರಾವತೀಮಿವ ॥೨೧೯॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ವಾಲ್ಮೀಕೀಯೇ ಆದಿಕಾವ್ಯೇ
ಸುಂದರಕಾಂಡೇ ಪ್ರಥಮಸ್ಸರ್ಗಃ

| ಪದಚ್ಛೇದ | ಅನ್ವಯ |
|---|---|
| ಸಃ, ಸಾಗರಂ, ದಾನವಪನ್ನಗಾಯುತಂ ಬಲೇ ನ ವಿಕ್ರಮ್ಯಮಹೋರ್ಮಿಮಾಲಿನಂ, ನಿಪತ್ಯ, ತೀರೇ, ಚ, ಮಹೋದಧೇಃ, ತದಾ, ದದರ್ಶ, ಲಂ ಕಾಂ, ಅಮರಾವತೀಂ, ಇವ ॥೨೧೯॥ | ತದಾ, ಸಃ, ದಾನವಪನ್ನಗಾಯುತಂ, ಮ ಹೋರ್ಮಿಮಾಲಿನಂ ಸಾಗರಂ, ಬಲೇನ ವಿಕ್ರಮ್ಯ, ಮಹೋದಧೇಃ, ತೀರೇ, ನಿಪತ್ಯ, ಅಮರಾವತೀಮಿ ವಸ್ಥಿತಾಂ ಲಂಕಾಂ ದದರ್ಶ ॥೨೧೯॥ |

ತದಾ-ಆ ಕಾಲದಲ್ಲಿ, ಸಃ-ಆ ಮಾರುತಿಯು, ದಾನವಪನ್ನಗಾಯುತಂ-ರಾಕ್ಷಸರಿಂದಲೂ ಹಾವು
ಲಂದಲೂ ಎಲ್ಲಾ ಕಡೆಯಲ್ಲೂ ಕೂಡಿಕೊಂಡಿರುವ, ಮಹೋರ್ಮಿಮಾಲಿನಂ-ದೊಡ್ಡದೊಡ್ಡ ಕೆರೆಗಳೆಂಬ
ಮಾಲಿಕೆಗಳುಳ್ಳ, ಸಾಗರಂ-ಸಮುದ್ರವನ್ನು, ಬಲೇನ-ಸಾಮರ್ಥ್ಯದಿಂದ, ವಿಕ್ರಮ್ಯ-ಆಕ್ರಮಿಸಿ, ಮ
ಹೋದಧೇಃ-ಸಮುದ್ರ, ತೀರೇ-ದಡದಲ್ಲಿ, ನಿಪತ್ಯ-ಇಳಿದು, ಅಮರಾವತೀಮಿವಸ್ಥಿತಾಂ-ದೇವೇಂದ್ರನರಾಜ
ಧಾನಿಯೂ ಎಂಬಂತೆ ಕಾಣುತಲಿರುವ, ಲಂಕಾಂ-ಲಂಕಾಪಟ್ಟಣವನ್ನು, ದದರ್ಶ-ಕಂಡನು ॥೨೧೯॥

ದೊಡಗೂಡಿ ಅತಿಮನೋಹರವಾಗಿ ಪರಿಶೋಭಿಸುತಲಿರುವ ಲಂಬಪರ್ವತದ ಎತ್ತರವಾದ
ಶಿಖರದಮೇಲೆ ತಾನು ಕುಳಿತು ಕೊಳ್ಳುವದಕ್ಕಾಗಿ ಅಲ್ಲಿತೆರಳುವನಾದನು॥೨೧೬॥

ಅನಂತರದಲ್ಲಿ ಆ ಮಾರುತಿಯು ತ್ರಿಕೂಟಾಚಲಶಿಖರದಲ್ಲಿರುವ ಲ[illegible]ಪವ
ನ್ನು ನೋಡಿದವನಾಗಿ ತನ್ನ ರೂಪವನ್ನು ಬದಲಾಯಿಸಿಕೊಂಡು ಅಲ್ಲಿ ಕ[illegible]ವ ಪಕ್ಷಿ
ಮೃಗಾದಿಗಳಿಗೆಲ್ಲಾ ಭಯವನ್ನುಂಟುಮಾಡುತ್ತಾ ಆ ತ್ರಿಕೂಟಾಚಲದ ಮಹೋನ್ನತವಾ
ದ ಶೃಂಗಕ್ಕೆ ಹಾರುವನಾದನು॥೨೧೮॥

ನಾನಾಕಡೆಯಲ್ಲೂ ರಾಕ್ಷಸರಪಾವಳಿಯಿಂದಲೂ, ಸರ್ಪ ಮತ್ಸ್ಯ ಮಕರಾದಿ
ಕರಾಳಜಂತುಗಳಿಂದಲೂ ಭಯಂಕರವಾದ ತಂಡೋಪತಂಡವಾಗಿಬರುತಲಿರುವ ತರಂಗ
ಪರಂಪರೆಗಳಿಂದ ಯುಕ್ತವಾದ್ದರಿಂದಲೆ ಪುಷ್ಪಮಾಲಿಕೆಗಳನ್ನು ಧರಿಸುಕೊಂಡಿರುವಂತೆ
ಕಾಣುತಲಿರುವ ಮಹೋದಧಿಯನ್ನು ದಾಟಿ ಇಂದ್ರರಾಜಧಾನಿಯಾದ ಅಮರಾವತಿಯಂ
ತೆ ಕಂಗೊಳಿಸುತ್ತಲಿರುವ ಲಂಕಾನಗರಿಯನ್ನು ದೃಷ್ಟಿಸುವನಾದನು॥೨೧೯॥

ಇತಿ ಶ್ರೀಮದ್ವಾಲ್ಮೀಕಿ ಮಹಾಮುನಿವಿರಚಿತ ಶ್ರೀಮದ್ರಾಮಾಯಣ
ಸುಂದರಕಾಂಡಾರ್ಥ ಬೋಧಿನಿಯಲ್ಲಿ ಪ್ರಥಮಸರ್ಗವಾದುದು
ಶ್ರೀ ಸೀತಾ ಲಕ್ಷ್ಮಣ ಭರತ ಶತ್ರುಘ್ನ ಹನೂಮತ್ಸಮೇತ
ಶ್ರೀ ರಾಮಚಂದ್ರಪರಬ್ರಹ್ಮಣೇನಮಃ
॥ಓಂ ಸ್ವಸ್ತಿ॥

ಶ್ರೀಮದ್ರಾಮಾಯಣೇ ಆದಿಕಾವ್ಯೇ ಸುಂದರಕಾಂಡೇ ದ್ವಿತೀಯಸ್ಸರ್ಗಃ

ಮೂ॥ ಸಸಾಗರಮನಾಧೃಷ್ಯ ಮತಿಕ್ರಮ್ಯಮಹಾಬಲಃ ।
ತ್ರಿಕೂಟಶಿಖರೇಲಂಕಾಂ ಸ್ಥಿತಾಂಸ್ವಸ್ಥೋದದರ್ಶಹ ॥೧॥
ತತಃಪಾದಪಮುಕ್ತೇನ ಪುಷ್ಪವರ್ಷೇಣವೀರ್ಯವಾನ್ ।
ಅಭಿವೃಷ್ಟಃಸ್ಥಿತಸ್ತತ್ರ ಬಭೌಪುಷ್ಪಮಯೋಯಥಾ ॥೨॥

| ಪದಚ್ಛೇದ | ಅನ್ವಯ |
|---|---|
| ಸಃ, ಸಾಗರಂ, ಅನಾಧೃಷ್ಯಂ, ಅತಿಕ್ರಮ್ಯ, ಮಹಾಬಲಃ, ತ್ರಿಕೂಟಶಿಖರೇ, ಲಂಕಾಂ, ಸ್ಥಿತಾಂ, ಸ್ವಸ್ಥಃ, ದದರ್ಶಹ ॥೧॥ | ಮಹಾಬಲಃ ಸಃ ಅನಾಧೃಷ್ಯಂ ಸಾಗರಂ ಅತಿಕ್ರಮ್ಯ ಸ್ವಸ್ಥಃ ತ್ರಿಕೂಟಶಿಖರ ಸ್ಥಿತಾಂ ಲಂಕಾಂ ದದರ್ಶಹ ॥೧॥ |
| ತತಃ, ಪಾದಪಮುಕ್ತೇನ, ಪುಷ್ಪವರ್ಷೇಣ ವೀರ್ಯವಾನ್, ಅಭಿವೃಷ್ಟಃ, ಸ್ಥಿತಃ, ತತ್ರ, ಬಭೌ, ಪುಷ್ಪಮಯಃ, ಯಥಾ ॥೨॥ | ತತಃ, ತತ್ರಸ್ಥಿತಃ ವೀರ್ಯವಾನ್ ಸಃ ಪಾದಪಮುಕ್ತೇನ ಪುಷ್ಪವರ್ಷೇಣ ಅಭಿವೃಷ್ಟಃ, ಪುಷ್ಪಮಯೋಯಥಾ ಬಭೌ ॥೨॥ |

ಮಹಾಬಲಃ-ಅತಿಶಯವಾದಶಕ್ತಿಯುಳ್ಳ, ಸಃ-ಆ ಹನುಮಂತನು, ಅನಾಧೃಷ್ಯಂ -ತಿರಸ್ಕರಿಸಲಸದಳವಾದ, ಸಾಗರಂ-ಸಮುದ್ರವನ್ನು, ಅತಿಕ್ರಮ್ಯ-ದಾಟಿದವನಾಗಿ, ಸ್ವಸ್ಥಃ-ಸಮಾಹಿತಚಿತ್ತನಾಗಿ ತ್ರಿಕೂಟಶಿಖರೇ-ತ್ರಿಕೂಟಾಚಲದ ಶೃಂಗದಲ್ಲಿ, ಸ್ಥಿತಾಂ-ಇರುತಲಿರುವ, ಲಂಕಾಂ-ಲಂಕಾನಗರಿಯನ್ನು, ದದರ್ಶಹ-ನೋಡಿದನು ॥೧॥

ತತಃ-ಅನಂತರದಲ್ಲಿ, ತತ್ರ-ಆ ತ್ರಿಕೂಟಾಚಲದಲ್ಲಿ, ಸ್ಥಿತಃ-ನಿಂತಿದ್ದ, ವೀರ್ಯವಾನ್-ಪರಾಕ್ರಮಶಾಲಿಯಾದ, ಸಃ-ಆಮಾರುತಿಯು ಪಾದಪಮುಕ್ತೇನ-ಮರಗಳಿಂದಬಿಡಲ್ಪಟ್ಟ, ಪುಷ್ಪವರ್ಷೇಣ-ಪುಷ್ಪವೃಷ್ಟಿಯಿಂದ, ಅಭಿವೃಷ್ಟಃ ಮುಚ್ಚಲ್ಪಟ್ಟವನಾಗಿ, ಪುಷ್ಪಮಯಃ ಯಥಾ- ಪುಷ್ಪನಿರ್ಮಿತವಾದ ಕಪಿಯೋಪಾದಿಯಲ್ಲಿ, ಬಭೌ-ಪ್ರಕಾಶಿಸಿದನು ॥೨॥

ಮಹಾಬಲಶಾಲಿಯಾದ ಆ ಆಂಜನೇಯನು ಈ ಪ್ರಕಾರದಲ್ಲಿ ಸಾಮಾನ್ಯಜನರಿಗೆ ಅಸಾಧ್ಯವಾದ ಮಹಾಸಾಗರವನ್ನು ದಾಂಟಿ ಮುಹೂರ್ತಮಾತ್ರ ಚಿತ್ತಸಮಾಧಾನವನ್ನು ಪಡದವನಾಗಿ, ತ್ರಿಕೂಟಾಚಲದ ಶೃಂಗಾಗ್ರ ಸ್ಥಿತವಾದ ಲಂಕಾನಗರಿಯನ್ನು ವೀಕ್ಷಿಸುವನಾದನು ॥೧॥

ಆ ಬಳಿಕ ತ್ರಿಕೂಟಾಚಲದ ಶೃಂಗದಲ್ಲಿ ನಿಂತಿದ್ದ ಆ ಮಾರುತಿಯಮೇಲೆ ನಾನಾ ಕಡೆಯಿಂದಲೂ ಗಾಳಿಯಿಂದ ಮರಗಳ ಹೂವುಗಳು ಉದುರಿ ತತ್ಕಾಲದಲ್ಲಿ ನೋಡತಕ್ಕವರಿಗೆ ಆ ಹನುಮಂತನು ಹೂವಿನಿಂದ ರಚಿಸಲ್ಪಟ್ಟ ಬೊಂಬೆಯೋ ಎಂಬಂತೆ ಕಂಗೊಳಿಸುತ್ತಿದ್ದನು॥೨॥

ಮೂ ॥ ಯೋಜನಾನಾಂಶತಂಶ್ರೀಮಾಂ ಸ್ತೀರ್ತ್ವಾಪ್ಯುತ್ತಮವಿಕ್ರಮಃ ।
ಅನಿಶ್ವಸನ್ಕಪಿಸ್ತತ್ರ ನಗ್ಲಾನಿಮಧಿಗಚ್ಛತಿ ॥೩॥
ಶತಾನ್ಯಹಂಯೋಜನಾನಾಂ ಕ್ರಮೇಯಂಸುಬಹೂನ್ಯಪಿ ।
ಕಿಂಪುನಸ್ಸಾಗರಸ್ಯಾಂತಂ ಸಂಖ್ಯಾತಂ ಶತಯೋಜನಂ ॥೪॥

ಪದಚ್ಛೇದ

ಯೋಜನಾನಾಂ, ಶತಂ, ಶ್ರೀಮಾನ್, ತೀರ್ತ್ವಾ, ಅಪಿ, ಉತ್ತಮ ವಿಕ್ರಮಃ, ಅನಿಶ್ವಸನ್, ಕಪಿಃ ತತ್ರ, ನ, ಗ್ಲಾನಿಂ, ಅಧಿಗಚ್ಛತಿ ॥೩॥

ಶತಾನಿ, ಅಹಂ, ಯೋಜನಾನಾಂ, ಕ್ರಮೇಯಂ, ಸುಬಹೂನಿ, ಅಪಿ, ಕಿಂ, ಪುನಃ, ಸಾಗರಸ್ಯ ಅಂತಂ, ಸಂಖ್ಯಾತಂ, ಶತಯೋಜನಂ ॥೪॥

ಅನ್ವಯ

ಶ್ರೀಮಾನ್ ಉತ್ತಮವಿಕ್ರಮಃ ಕಪಿಃ, ಯೋಜನಾನಾಂ ಶತಂ, ತೀರ್ತ್ವಾಪಿ ತತ್ರ ಅನಿಶ್ವಸನ್ ಗ್ಲಾನಿಂ ನಾಧಿಗಚ್ಛತಿ ॥೩॥

ಅಹಂ, ಸುಬಹೂನಿ ಯೋಜನಾನಾಂ ಶತಾನ್ಯಪಿ ಕ್ರಮೇಯಂ, ಶತಯೋಜನಂ ಸಂಖ್ಯಾತಂ ಸಾಗರಸ್ಯ ಅಂತಂ ಕಿಂಪುನಃ ॥೪॥

ಶ್ರೀಮಾನ್-ಅಣಿಮಾದ್ಯಷ್ಟೈಶ್ವರ್ಯಸಂಪನ್ನನಾದ, ಉತ್ತಮವಿಕ್ರಮಃ-ಶ್ರೇಷ್ಠವಾದ ಸಾಮರ್ಥ್ಯವುಳ್ಳ, ಕಪಿಃ-ಆ ಮಾರುತಿಯು, ಯೋಜನಾನಾಂ ಶತಂ-ನೂರುಯೋಜನಗಳನ್ನು, ತೀರ್ತ್ವಾಪಿ-ದಾಟಿದಾಗ್ಯೂ, ತತ್ರ-ಆಸಮುದ್ರಲಂಘನವಿಷಯದಲ್ಲಿ, ಅನಿಶ್ವಸನ್-ಶ್ರಮಜನ್ಯವಾದ ನಿಶ್ವಾಸವನ್ನು ಬಹಳವಾಗಿ ಬಿಡದವನಾಗಿ, ಗ್ಲಾನಿಂ-ಬಳಲಿಕೆಯನ್ನು, ನಾಧಿಗಚ್ಛತಿ-ಹೊಂದದಿರುವನಾದನು ॥೩॥

ಅಹಂ-ನಾನು, ಸುಬಹೂನಿ-ಅನೇಕಗಳಾದ, ಯೋಜನಾನಾಂ-ಗಾವುದಗಳ, ಶತಾನ್ಯಪಿ-ನೂರುಗಳನ್ನೂ ಕೂಡ, ಕ್ರಮೇಯಂ-ದಾಟಬಲ್ಲೆನು, ಶತಯೋಜನಂ-ನೂರುಗಾವುದವಾಗಿ, ಸಂಖ್ಯಾತಂ-ಗಣಿಸಲ್ಪಟ್ಟಿರುವ, ಸಾಗರಸ್ಯ-ದಕ್ಷಿಣೋದಧಿಯ, ಅಂತಂ-ಕೊನೆಯನ್ನು, ಕಿಂಪುನಃ-ಹೇಳತಕ್ಕದ್ದೇನು ॥೪॥

ಅಣಿಮಾದಿ ಸಂಪತ್ತಿಯುಕ್ತನಾದ ಅಮೋಘವೀರ್ಯನಾದ ಆ ಮಾರುತಿಯು, ನೂರುಯೋಜನ ವಿಸ್ತಾರವುಳ್ಳ ಆ ಮಹಾಸಮುದ್ರವನ್ನು ದಾಟಿದವನಾಗಿದ್ದಾಗ್ಯೂ ಸ್ವಲ್ಪವೂ ಆಯಾಸವನ್ನಾಗಲೀ ದೀರ್ಘ ದೀರ್ಘವಾದ ಉಸಿರನ್ನಾಗಲಿ ಬಿಡದೆ ಸಮಾಹಿತಾಂತಃ ಕರಣನಾಗಿದ್ದನು॥೩॥

ಅನೇಕ ಶತಯೋಜನಗಳನ್ನು ಏಕದಾ ದಾಟಲು ಸಮರ್ಥನಾದ ನನಗೆ ಈ ಒಂದು ನೂರುಯೋಜನ ವಿಸ್ತಾರವುಳ್ಳ ದಕ್ಷಿಣಸಮುದ್ರದ ಕೊನೆಯನ್ನು ಮುಟ್ಟುವದು ಬಹು ದೊಡ್ಡ ಕಾರ್ಯವಲ್ಲವೆಂಬದಾಗಿ ಮಾರುತಿಯು ತತ್ಕಾಲದಲ್ಲಿ ನೆನಸುವನಾದನು॥೪॥

ಮೂ ॥ ಸತುವೀರ್ಯವತಾಂಶ್ರೇಷ್ಠಃ ಪ್ಲವತಾಮಪಿಚೋತ್ತಮಃ ।
ಜಗಾಮವೇಗವಾನ್ ಲಂಕಾಂಲಂಘಯಿತ್ವಾಮಹೋದಧಿಂ ॥೫॥
ಶಾದ್ವಲಾನಿಚನೀಲಾನಿ ಗಂಧವಂತಿವನಾನಿಚ ।
ಗಂಡವಂತಿಚಮಧ್ಯೇನ ಜಗಾಮನಗವಂತಿಚ ॥೬॥

| ಪದಚ್ಛೇದ | ಅನ್ವಯ |
|---|---|
| ಸಃ, ತು, ವೀರ್ಯವತಾಂ, ಶ್ರೇಷ್ಠಃ, ಪ್ಲವತಾಂ, ಅಪಿ, ಚ, ಉತ್ತಮಃ, ಜಗಾಮ, ವೇಗವಾನ್, ಲಂಕಾಂ, ಲಂಘಯಿತ್ವಾ, ಮಹೋದಧಿಂ॥೫ | ವೀರ್ಯವತಾಂ ಶ್ರೇಷ್ಠಃ, ಪ್ಲವತಾಮಪಿ ಉತ್ತಮಃ, ಸತು, ಮಹೋದಧಿಂ ಲಂಘಯಿತ್ವಾ, ವೇಗವಾನ್, ಲಂಕಾಂ ಜಗಾಮ ॥೫॥ |
| ಶಾದ್ವಲಾನಿ, ಚ, ನೀಲಾನಿ, ಗಂಧವಂತಿ, ವನಾನಿ, ಚ, ಗಂಡವಂತಿ, ಚ, ಮಧ್ಯೇನ, ಜಗಾಮ, ನಗವಂತಿ, ಚ ॥೬॥ | ನೀಲಾನಿ ಶಾದ್ವಲಾನಿ, ಗಂಧವಂತಿ ಗಂಡವಂತಿ ನಗವಂತಿ ವನಾನಿಚ (ಪಶ್ಯನ್) ಮಧ್ಯೇನ ಜಗಾಮ ॥೬॥ |

ವೀರ್ಯವತಾಂ-ಪರಾಕ್ರಮಿಗಳೊಳಗೆ, ಶ್ರೇಷ್ಠಃ-ಉತ್ಕೃಷ್ಟನಾದ, ಪ್ಲವತಾಮಪಿ-ಕಪಿಗಳೊಳಗೆಲ್ಲಾ, ಉತ್ತಮಃ-ಅಧಿಕನಾದ, ಸತು-ಆಮಾರುತಿಯಾದರೋ, ಮಹೋದಧಿಂ-ದಕ್ಷಿಣಸಾಗರವನ್ನು, ಲಂಘಯಿತ್ವಾ-ದಾಟಿ, ವೇಗವಾನ್-ವೇಗವುಳ್ಳವನಾಗಿ, ಲಂಕಾಂ-ಲಂಕಾನಗರಿಯನ್ನು ಕುರಿತು, ಜಗಾಮ-ಹೊರಟನು ॥೫॥

ನೀಲಾನಿ-ತಪ್ಪಾದ, ಶಾದ್ವಲಾನಿ-ಪೈರುಗಳುಳ್ಳಪ್ರದೇಶಗಳನ್ನು, ಗಂಧವಂತಿ-ಪರಿಮಳಯುಕ್ತವಾದ, ಗಂಡವಂತಿ-ದೊಡ್ಡಕಲ್ಲುಗಳುಳ್ಳ, ನಗವಂತಿ-ಬೆಟ್ಟಗಳುಳ್ಳ, ವನಾನಿಚ-ವನಗಳನ್ನೂ ಕೂಡ, (ಪಶ್ಯನ್-ನೋಡುತಲಿರುವನಾಗಿ), ಮಧ್ಯೇನ-ವನಮಧ್ಯಮಾರ್ಗದಿಂದ, ಜಗಾಮ-ಹೊರಟನು ॥೬॥

ವೀರ್ಯಶಾಲಿಗಳೊಳಗೆಲ್ಲೆಲ್ಲಾ ಅತ್ಯುತ್ತಮನಾದ, ಆ ಕಪಿವರ್ಯರೆಲ್ಲೆಲ್ಲಾ ಅಗ್ರಗಣ್ಯನಾದ ಆ ಮಾರುತಿಯು ಈ ರೀತಿಯಲ್ಲಿ ಶತಯೋಜನವಿಸ್ತೃತವಾದ ಆ ದಕ್ಷಿಣ ಮಹೋದಧಿಯನ್ನುಉಲ್ಲಂಘನಮಾಡಿ ಅತಿಶಯಿತವಾದ ವೇಗದಿಂದ ಲಂಕಾ ರಾಜಧಾನಿಯ ಕಡೆಗೆ ಪ್ರಯಾಣೋನ್ಮುಖನಾದನು॥೫॥

ಶ್ಯಾಮಲವರ್ಣವಾದ ದೂರ್ವಾಂಕುರಗಳಿಂದ ಯುಕ್ತವಾಗಿಯೂ ಸುರಭಿಗಳಾದ ಪುಷ್ಪಗಳ ಸುವಾಸನೆಯಿಂದ ಯುಕ್ತವಾಗಿಯೂ, ಕಲ್ಲುಗಳು ಗುಡ್ಡಗಳು ಇವುಗಳಿಂದ ಭರಿತವಾಗಿಯೂ, ಇದ್ದ ಆ ವನದ ಮಧ್ಯಮಾರ್ಗದಲ್ಲಿ ಪ್ರವೇಶಿಸಿಲಂಕಾಪಟ್ಟಣಕಡೆಗೆ ಆ ಮಾರುತಿಯು ತೆರಳುವನಾದನು॥೬॥

ಮೂ॥ ಶೈಲಾಂಶ್ಚ ತರುಸಂಛನ್ನಾನ್ ವನರಾಜೀಶ್ಚ ಪುಷ್ಪಿತಾಃ ।
ಅಭಿಚಕ್ರಾಮ ತೇಜಸ್ವೀ ಹನುಮಾನ್ ಪ್ಲವಗರ್ಷಭಃ ॥೩॥
ಸತಸ್ಮಿನ್ನಚಲೇ ತಿಷ್ಠನ್ ವನಾನ್ಯುಪವನಾನಿ ಚ ।
ಸನಗಾಗ್ರೇ ಚ ತಾಂ ಲಂಕಾಂ ದದರ್ಶ ಪವನಾತ್ಮಜಃ ॥೪॥

**ಪದಚ್ಛೇದ**

ಶೈಲಾನ್, ಚ, ತರುಸಂಛನ್ನಾನ್, ವನರಾಜೀಃ, ಚ, ಪುಷ್ಪಿತಾಃ, ಅಭಿಚಕ್ರಾಮ, ತೇಜಸ್ವೀ, ಹನುಮಾನ್, ಪ್ಲವಗರ್ಷಭಃ ॥೩॥

ಸಃ, ತಸ್ಮಿನ್, ಅಚಲೇ, ತಿಷ್ಠನ್, ವನಾನಿ, ಉಪವನಾನಿ, ಚ, ಸನಗಾಗ್ರೇ, ಚ, ತಾಂ, ಲಂಕಾಂ, ದದರ್ಶ, ಪವನಾತ್ಮಜಃ ॥೪॥

**ಅನ್ವಯ**

ತೇಜಸ್ವೀ ಪ್ಲವಗರ್ಷಭಃ ಹನುಮಾನ್ ತರುಸಂಛನ್ನಾನ್ ಶೈಲಾನ್, ಪುಷ್ಪಿತಾಃ ವನರಾಜೀಶ್ಚ ಅಭಿಚಕ್ರಾಮ ॥೩॥

ಪವನಾತ್ಮಜಃ, ಸಃ, ಸನಗಾಗ್ರೇ, ತಸ್ಮಿನ್ ಅಚಲೇ, ತಿಷ್ಠನ್, ತಾಂ, ಲಂಕಾಂ, ವನಾನಿ, ಉಪವನಾನಿ, ಚ, ದದರ್ಶ ॥೪॥

ತೇಜಸ್ವೀ-ತೇಜಶ್ಶಾಲಿಯಾದ, ಪ್ಲವಗರ್ಷಭಃ-ಕಪಿಗಳೊಳಗೆಲ್ಲಾ ಶ್ರೇಷ್ಠನಾದ, ಹನುಮಾನ್-ಮಾರುತಿಯು, ತರುಸಂಛನ್ನಾನ್-ವೃಕ್ಷಗಳಿಂದ ವ್ಯಾಪಿಸಲ್ಪಟ್ಟಿರುವ, ಶೈಲಾನ್-ಪರ್ವತಗಳನ್ನು, ಪುಷ್ಪಿತಾಃ-ಪುಷ್ಪಯುಕ್ತಗಳಾದ, ವನರಾಜೀಶ್ಚ, ವನಪಂಕ್ತಿಗಳನ್ನೂ ಕೂಡ, ಅಭಿಚಕ್ರಾಮ-ಅತಿಕ್ರಮಿಸಿನಡೆದನು ॥೩॥

ಪವನಾತ್ಮಜಃ-ವಾಯುಪುತ್ರನಾದ, ಸಃ-ಆ ಹನುಮಂತನು, ಸನಗಾಗ್ರೇ-ಪರ್ವತಾಗ್ರಗಳಿಂದ ಕೂಡಿಕೊಂಡಿರುವ, ತಸ್ಮಿನ್ ಅಚಲೇ-ಆ ಪರ್ವತದಲ್ಲಿ, ತಿಷ್ಠನ್-ಕೂತುಕೊಳ್ಳುವವನಾಗಿ, ತಾಂ ಲಂಕಾಂ-ಆ ಲಂಕಾಪಟ್ಟಣವನ್ನು, ವನಾನಿ-ಅದರಸುತ್ತಲಿರುವ ವನಗಳನ್ನು, ಉಪವನಾನಿಚ-ಉದ್ಯಾನವನಗಳನ್ನು, ದದರ್ಶ-ನೋಡಿದನು ॥೪॥

ಮಹಾ ತೇಜಸ್ವಿಯೂ ಕಪಿವರ್ಯನಾಗಿಯೂ ಇರುವ ಆ ಮಾರುತಿಯು ತಂಪಾದ ನೆರಳುಗಳನ್ನು ಕೊಡತಕ್ಕಮರಗಳಿಂದ ಸುತ್ತುವರಿಯಲ್ಪಟ್ಟ ಬೆಟ್ಟಗಳನ್ನು, ಸುಗಂಧಯುಕ್ತಗಳಾದ ಪುಷ್ಪಗಳಿಂದ ಕೂಡಿದ ವನ ಪಂಕ್ತಿಗಳನ್ನು' ಸುಗಂಧಯುಕ್ತಗಳಾದ ಪುಷ್ಪಗಳಿಂದ ಕೂಡಿದ ವನಪಂಕ್ತಿಗಳನ್ನು ತಾನು ಲಂಕೆಗೆ ತೆರಳುವ ವನಮಧ್ಯ ಮಾರ್ಗದಲ್ಲಿ ಆನಂದದಿಂದ ಅವಲೋಕಿಸುತ್ತಾ ಹೋರಟನು ॥೩॥

ವಾಯುಪುತ್ರನಾದ ಆ ಮಾರುತಿಯು ಆತ್ರಿಕೂಟಾಚಲದಲ್ಲಿ ಕುಳಿತುಕೊಳ್ಳುವವನಾಗಿ ನಾನಾಪರ್ವತಾಗ್ರಗಳಿಂದಲೂ ಕಾಡುಗಳಿಂದಲೂ, ಉದ್ಯಾನವನಗಳಿಂದಲೂ ರಮ್ಯಗಳಾದ ವೃಕ್ಷ ಲತಾ ಗುಲ್ಮಗಳಿಂದಲೂ ಕೂಡಿಕೊಂಡಿರುವ ಲಂಕಾನಗರಿಯನ್ನು ನೋಡುವನಾದನು ॥೪॥

ಮೂ ॥ ಸರಲಾನ್ಕರ್ಣಿಕಾರಾಂಶ್ಚ ಖರ್ಜೂರಾಂಶ್ಚ ಸುಪುಷ್ಪಿತಾನ್ ।
ಪ್ರಿಯಾಲಾನ್ಮುಚುಲಿಂದಾಂಶ್ಚ ಕುಟಜಾನ್ಕೇತಕಾನಪಿ ॥೯॥
ಪ್ರಿಯಂಗೂನ್ಗಂಧಪೂರ್ಣಾಂಶ್ಚ ನೀಪಾನ್ಸಪ್ತಚ್ಛದಾಂಸ್ತಥಾ ।
ಅಸನಾನ್ಕೋವಿದಾರಾಂಶ್ಚ ಕರವೀರಾಂಶ್ಚ ಪುಷ್ಪಿತಾನ್ ॥೧೦॥
ಪುಷ್ಪಭಾರನಿಬದ್ಧಾಂಶ್ಚ ತಥಾ ಮುಕುಲಿತಾನಪಿ ।
ಪಾದಪಾನ್ವಿಹಗಾಕೀರ್ಣಾನ್ಪವನಾಧೂತಮಸ್ತಕಾನ್ ॥೧೧॥
ಹಂಸಕಾರಂಡವಾಕೀರ್ಣಾ ವಾಪೀಃ ಪದ್ಮೋತ್ಪಲಾಯುತಾಃ ।
ಆಕ್ರೀಡಾನ್ವಿವಿಧಾನ್ರಮ್ಯಾನ್ವಿವಿಧಾಂಶ್ಚ ಜಲಾಶಯಾನ್ ॥೧೨॥
ಸಂತತಾನ್ವಿವಿಧೈರ್ವೃಕ್ಷೈಃ ಸರ್ವರ್ತುಫಲಪುಷ್ಪಿತೈಃ ।
ಉದ್ಯಾನಾನಿ ಚ ರಮ್ಯಾಣಿ ದದರ್ಶ ಕಪಿಕುಂಜರಃ ॥೧೩॥

ಸರಳಾನ್, ಕರ್ಣಿಕಾರಾನ್, ಚ, ಖರ್ಜೂರಾನ್, ಚ, ಸುಪುಷ್ಪಿತಾನ್, ಪ್ರಿಯಾಲಾನ್, ಮುಚುಲಿಂದಾನ್, ಚ, ಕುಟಜಾನ್, ಕೇತಕಾನ್, ಅಪಿ, ಪ್ರಿಯಂಗೂನ್, ಗಂಧಪೂರ್ಣಾನ್, ಚ, ನೀಪಾನ್ ಸಪ್ತಚ್ಛದಾನ್, ತಥಾ, ಅಸನಾನ್, ಕೋವಿದಾರಾನ್, ಚ, ಕರವೀರಾನ್, ಚ, ಪುಷ್ಪಿತಾನ್, ಪುಷ್ಪಭಾರನಿಬದ್ಧಾನ್, ಚ, ತಥಾ, ಮುಕುಲಿತಾನ್, ಅಪಿ, ಪಾದಪಾನ್, ವಿಹಗಾಕೀರ್ಣಾನ್, ಪವನಾಧೂತಮಸ್ತಕಾನ್, ಹಂಸಕಾರಂಡವಾಕೀರ್ಣಾಃ, ವಾಪೀಃ, ಪದ್ಮೋತ್ಪಲಾಯುತಾಃ, ಆಕ್ರೀಡಾನ್, ವಿವಿಧಾನ್, ರಮ್ಯಾನ್, ವಿವಿಧಾನ್, ಚ, ಜಲಾಶಯಾನ್, ಸಂತತಾನ್, ವಿವಿಧೈಃ, ವೃಕ್ಷೈಃ, ಸರ್ವರ್ತುಫಲಪುಷ್ಪಿತೈಃ, ಉದ್ಯಾನಾನಿ, ಚ, ರಮ್ಯಾಣಿ, ದದರ್ಶ, ಕಪಿಕುಂಜರಃ ॥೯-೧೦-೧೧-೧೨-೧೩॥

ಅನ್ವಯ

ಕಪಿಕುಂಜರಃ, ಸರಳಾನ್, ಕರ್ಣಿಕಾರಾಂಶ್ಚ, ಸುಪುಷ್ಪಿತಾನ್ ಖರ್ಜೂರಾಂಶ್ಚ, ಪ್ರಿಯಾಲಾನ್, ಮುಚುಲಿಂದಾಂಶ್ಚ, ಕುಟಜಾನ್, ಕೇತಕಾನಪಿ, ಗಂಧಪೂರ್ಣಾನ್, ಪ್ರಿಯಂಗೂನ್, ನೀಪಾನ್, ಸಪ್ತಚ್ಛದಾನ್, ತಥಾ ಅಸನಾನ್, ಪುಷ್ಪಿತಾನ್ ಕರವೀರಾಂಶ್ಚ, ಪುಷ್ಪಭಾರನಿಬದ್ಧಾನ್ ತಥಾ ಮುಕುಳಿತಾನ್, ವಿಹಗಾಕೀರ್ಣಾನ್, ಪವನಾಧೂತಮಸ್ತಕಾನ್, ಪಾದಪಾನಪಿ, ಹಂಸಕಾರಂಡವಾಕೀರ್ಣಾಃ ಪದ್ಮೋತ್ಪಲಾಯುತಾಃ ವಾಪೀಃ ವಿವಿಧಾನ್ ರಮ್ಯಾನ್ ಆಕ್ರೀಡಾನ್, ವಿವಿಧೈಃ ಸರ್ವರ್ತುಫಲಪುಷ್ಪಿತೈಃ ವೃಕ್ಷೈಃ ಸಂತತಾನ್, ವಿವಿಧಾನ್ ಜಲಾಶಯಾನ್, ರಮ್ಯಾಣಿ ಉದ್ಯಾನಾನಿ ಚ ದದರ್ಶ ॥೯-೧೦-೧೧-೧೨-೧೩॥

ಕಪಿಕುಂಜರಃ-ವಾನರಶ್ರೇಷ್ಠನಾದ ಆ ಮಾರುತಿಯು, ಸರಳಾನ್-ದೇವದಾರುವೃಕ್ಷಗಳನ್ನು, ಕರ್ಣಿಕಾರಾಂಶ್ಚ-ಬೆಟ್ಟದಾವರೆಮರಗಳನ್ನು, ಸುಪುಷ್ಪಿತಾನ್-ಚೆನ್ನಾಗಿಹೂವಾಗಿರುವ, ಖರ್ಜೂರಾಂಶ್ಚ-ಖರ್ಜೂರಗಿಡಗಳನ್ನು, ಪ್ರಿಯಾಲಾನ್-ಮೋರಟ್ಟಿಮರಗಳನ್ನು, ಮುಚುಲಿಂದಾಂಶ್ಚ-ಸೀನಿಂಬೆಗಿಡಗಳ

ಮೂ॥ ಸಮಾಸಾದ್ಯಚಲಕ್ಷ್ಮೀವಾನ್ ಲಂಕಾಂರಾವಣಪಾಲಿತಾಂ ।
ಪರಿಘಾಭಿಃ ಸಪದ್ಮಾಭಿಃ ಸೋತ್ಪಲಾಭಿರಲಂಕೃತಾಂ ॥೧೪॥

ಪದಚ್ಛೇದ

ಸಮಾಸಾದ್ಯ, ಚ, ಲಕ್ಷ್ಮೀವಾನ್, ಲಂಕಾಂ, ರಾವಣಪಾಲಿತಾಂ, ಪರಿಘಾಭಿಃ, ಸಪದ್ಮಾಭಿಃ, ಸೋತ್ಪಲಾಭಿಃ, ಅಲಂಕೃತಾಂ॥೧೪॥

ಅನ್ವಯ

ಲಕ್ಷ್ಮೀವಾನ್ ಸಪದ್ಮಾಭಿಃ, ಪರಿಘಾಭಿಃ ಅಲಂಕೃತಾಂ, ರಾವಣಪಾಲಿತಾಂ, ಲಂಕಾಂ, ಸಮಾಸಾದ್ಯ(೧೩ನೇ ಶ್ಲೋಕದಲ್ಲಿರುವ ದದರ್ಶಎಂಬ ಕ್ರಿಯೆಯೊಡನೆ ಈಶ್ಲೋಕಕ್ಕೆ ಏಕಾನ್ವಯ॥೧೪

ನ್ನು, ಕುಟಜಾನ್-ಗಿರಿಮಲ್ಲಿಗೆಗಿಡಗಳನ್ನು, ಕೇತಕಾನಪಿ-ತಾಳೇಗಿಡಗಳನ್ನು, ಗಂಧಪೂರ್ಣಾನ್-ಸುಗಂಧಯುಕ್ತಗಳಾದ-ಪ್ರಿಯಂಗೂನ್-ಪ್ರಿಂಕಣದಗಿಡಗಳನ್ನು, ನೀಪಾನ್-ಈಚಲಮರಗಳನ್ನು, ಸಪಚ್ಛೇದಾನ್-ಏಳೆಲೆಬಾಳೇಗಿಡಗಳನ್ನು, ತಥಾ-ಹಾಗೆಯೆ, ಅಸನಾನ್-ಬಂದುಗೆಗಿಡಗಳನ್ನು, ಪುಷ್ಪಿತಾನ್-ಪುಷ್ಪಿಸಿದ, ಕರವೀರಾಂಶ್ಚ-ಕಣಗಿಲೆಗಿಡಗಳನ್ನು, ಪುಷ್ಪಭಾರನಿಬದ್ಧಾನ್-ಹೂವುಗಳ ಹೊರೆಯಿಂದ ಕಟ್ಟಲ್ಪಟ್ಟ, ತಥಾ-ಹಾಗೆಯೆ, ಮುಕುಳಿತಾನ್-ಮೊಗ್ಗಾಗಿರುವ, ವಿಹಗಾಕೀರ್ಣಾನ್-ಪಕ್ಷಿಗಳಿಂದ ವ್ಯಾಪ್ತಗಳಾದ, ಪವನಾಧೂತಮಸ್ತಕಾನ್-ವಾಯುವಿನಿಂದ, ಕೊಡಹಲ್ಪಟ್ಟ ಅಗ್ರಭಾಗಗಳುಳ್ಳ, ಪಾದಪಾನಪಿ-ವೃಕ್ಷಗಳನ್ನೂ ಕೂಡ, ಹಂಸಕಾರಂಡವಾಕೀರ್ಣಾಃ-ಹಂಸಕಾರಂಡವೇ ಮೊದಲಾದ ನೀರು ಹಕ್ಕಿಗಳಿಂದ ವ್ಯಾಪ್ತಗಳಾದ, ಪದ್ಮೋತ್ಪಲಾಯುತಾಃ-ತಾವರೆ ಮತ್ತು ಕನ್ನೈದಿಲೆಬಳ್ಳಿಗಳಿಂದಯುಕ್ತವಾದ, ವಾಪೀಃ-ಭಾವಿಗಳನ್ನು, ವಿವಿಧಾನ್-ನಾನಾವಿಧಗಳಾದ, ರಮ್ಯಾನ್-ಮನೋಹರಗಳಾದ, ಆಕ್ರೀಡಾನ್-ಕ್ರೀಡಾಸ್ಥಾನಗಳನ್ನು, ವಿವಿಧೈಃ-ನಾನಾಬಗೆಗಳಾದ, ಸರ್ವರ್ತುಫಲಪುಷ್ಪಿತೈಃ-ಎಲ್ಲಾ ಋತುಗಳಲ್ಲಿಯೂ ಬೆಳೆಯತಕ್ಕಫಲಗಳಿಂದಲೂ ಪುಷ್ಪಗಳಿಂಲೂ ಯುಕ್ತಗಳಾದ, ವೃಕ್ಷೈಃ-ಮರಗಳಿಂದ, ಸಂತತಾನ್-ಕೂಡಿಕೊಂಡಿರುವ, ವಿವಿಧಾನ್-ಅನೇಕವಿಧಂಗಳಾದ, ಜಲಾಶಯಾನ್-ಸರೋವರಗಳನ್ನು, ರಮ್ಯಾಣಿ-ಮನೋಹರಗಳಾದ, ಉದ್ಯಾನಾನಿಚ-ಕ್ರೀಡಾವನಗಳನ್ನೂ ಸಹ, ದದರ್ಶ-ನೋಡಿದನು ॥೯-೧೦-೧೧-೧೨-೧೩॥

ಲಕ್ಷ್ಮೀವಾನ್-ಅಣಿಮಾದ್ಯಷ್ಟೈಶ್ವರ್ಯಯುಕ್ತನಾದ ಆ ಮಾರುತಿಯು, ಸಪದ್ಮಾಭಿಃ-ಕಮಲಲತೆಗಳಿಂದಕೂಡಿಕೊಂಡಿರುವ, ಸೋತ್ಪಲಾಭಿಃ-ಕನ್ನೈದಿಲೆಬಳ್ಳಿಗಳಿಂದೊಡಗೂಡಿದಪರಿಘಾಭಿಃ-ಕಂದಕಗಳಿಂದ, ಅಲಂಕೃತಾಂ-ಪರಿಶೋಭಿತವಾದ, ರಾವಣಪಾಲಿತಾಂ-ರಾವಣಾಸುರನಿಂದ ರಕ್ಷಿತವಾದ, ಲಂಕಾಂ-ಲಂಕಾಪಟ್ಟಣವನ್ನು, ಸಮಾಸಾದ್ಯ-ಹೊಂದಿದವನಾಗಿ॥೧೪॥

ತ್ರಿಕೂಟಾಚಲದಮೇಲೆ ಲಂಕಾನಗರವನ್ನು ನೋಡುವುದಕ್ಕೋಸುಗ ನಿಂತಿದ್ದ ಆ ಕಪಿಶ್ರೇಷ್ಠನಾದ ಮಾರುತಿಯು ಸರಳ, ಕರ್ಣಿಕಾರ, ಖರ್ಜೂರ, ಪ್ರಿಯಾಳ, ಜಂಬೀರ ಗಿರಿಮಲ್ಲಿಕಾ, ಕೇತಕೀ,ಪ್ರಿಯಂಗು, ನೀಪ, ಕರ್ಪೂರ ಕದಳೀ, ಅಸನ, ಕೋವಿದಾರ ಕರವೀರ ಮುಂತಾದ ಅರಳಿದ ಹೂವುಗಳಿಂದಕೂಡಿದ ಮತ್ತು ದುಂಡಾದ ಮೊಗ್ಗುಗಳಿಂ

ಮೂ ॥ ಸೀತಾಪಹರಣಾರ್ಥೇನ ರಾವಣೇನಸುರಕ್ಷಿತಾಂ ।
ಸಮಂತಾದ್ವಿಚರದ್ಭಿಶ್ಚ ರಾಕ್ಷಸೈರುಗ್ರಧನ್ವಿಭಿಃ ॥೧೫॥
ಕಾಂಚನೇನಾವೃತಾಂರಮ್ಯಾಂ ಪ್ರಾಕಾರೇಣಮಹಾಪುರೀಂ ।
ಗೃಹೈಶ್ಚಗ್ರಹಸಂಕಾಶೈಃ ಶಾರದಾಂಬುದಸನ್ನಿಭೈಃ ॥೧೬॥

**ಪದಚ್ಛೇದ**

ಸೀತಾಪಹರಣಾರ್ಥೇನ, ರಾವಣೇನ, ಸುರಕ್ಷಿತಾಂ, ಸಮಂತಾತ್, ವಿಚರದ್ಭಿಃ, ಚ, ರಾಕ್ಷಸೈಃ ಉಗ್ರಧನ್ವಿಭಿಃ॥೧೫॥

ಕಾಂಚನೇನ, ಆವೃತಾಂ, ರಮ್ಯಾಂ, ಪ್ರಾಕಾರೇಣ, ಮಹಾಪುರೀಂ, ಗೃಹೈಃ, ಚ, ಗ್ರಹಸಂಕಾಶೈಃ, ಶಾರದಾಂಬುದಸನ್ನಿಭೈಃ ॥೧೬॥

**ಅನ್ವಯ**

ಸೀತಾಂಪಹರಣಾರ್ಥೇನ ರಾವಣೇನ, ಸಮಂತಾತ್ವಿಚರದ್ಭಿಃ ಉಗ್ರಧನ್ವಿಭಿಃ ರಾಕ್ಷಸೈಶ್ಚ, ಸುರಕ್ಷಿತಾಂ (ಲಂಕಾಂ ದದರ್ಶ) ॥೧೫॥

ಕಾಂಚನೇನ, ಪ್ರಾಕಾರೇಣ, ಗ್ರಹಸಂಕಾಶೈಃ ಶಾರದಾಂಬುಧ ಸನ್ನಿಭೈಃ ಗೃಹೈಶ್ಚ ಆವೃತಾಂ ರಮ್ಯಾಂ ಮಹಾಪುರೀಂ (ಲಂಕಾಂದದರ್ಶ) ॥೧೬॥

ಸೀತಾಪಹರಣಾರ್ಥೇನ-ಸೀತಾಪಹರಣವೇ ಮುಖ್ಯಪ್ರಯೋಜನವುಳ್ಳ, ರಾವಣೇನ-ರಾವಣಾಸುರನಿಂದಲೂ, ಸಮಂತಾತ್-ಯಲ್ಲಾಕಡೆಯಲ್ಲೂ, ವಿಚರದ್ಭಿಃ-ಸಂಚರಿಸುತಲಿರುವ ಉಗ್ರಧನ್ವಿಭಿಃ-ತೀಕ್ಷ್ಣಾಯುಧಧಾರಿಗಳಾದ, ರಾಕ್ಷಸೈಶ್ಚ-ರಾಕ್ಷಸಭಟರಿಂದಲೂ, ಸಂರಕ್ಷಿತಾಂ-ಚನ್ನಾಗಿಕಾಪಾಡಲ್ಪಟ್ಟಿರುವ (ಲಂಕಾಂ ದದರ್ಶ-ಲಂಕೆಯನ್ನು ನೋಡಿದನು) ಎಂದು ೧೮ನೇಶ್ಲೋಕದೊಡನೆ ಅನ್ವಯ ॥೧೫॥

ಕಾಂಚನೇನ-ಸುವರ್ಣಮಯವಾದ, ಪ್ರಾಕಾರೇಣ-ಕೋಟೆಯಿಂದಲೂ, ಗ್ರಹಸಂಕಾಶೈಃ-ಸೂರ್ಯಾದಿಗ್ರಹಗಳಿಗೆ ಸಮಾನಗಳಾದ, ಶಾರದಾಂಬುದಸಂನ್ನಿಭೈಃ-ಶರತ್ಕಾಲದಮೇಘಗಳಂತೆ ಶುಭ್ರಗಳಾದ ಗೃಹೈಶ್ಚ-ಮನೆಗಳಿಂದಲೂಕೂಡ ಆವೃತಾಂ-ಆವರಿಸಲ್ಪಟ್ಟಿರುವ, ರಮ್ಯಾಂ-ಮನೋಹರವಾದ, ಮಹಾಪುರೀಂ-ಮಹಾಪಟ್ಟಣವಾದ (ಲಂಕಾಂ ದದರ್ಶ-ಲಂಕೆಯನ್ನು ನೋಡಿದನು) ॥೧೬॥

ದ ಯುಕ್ತಗಳಾದ, ಶುಕ, ಪಿಕ, ಶಾರಿಕ, ಕಲಕಂಠ ಕಂಠರವಗಳಿಂದ ಶಬ್ದಾಯಮಾನಗಳಾದ, ತಂಗಾಳಿಯಿಂದ ಚಲಿಸಲ್ಪಟ್ಟ ಅಗ್ರಭಾಗಗಳುಳ್ಳ ವೃಕ್ಷಗಳನ್ನೂ, ಹಂಸಕಾರಂಡವಾದಿ ಜಲಚರಪಕ್ಷಿಗಳಿಂದಲೂ, ಸುರಭಿಗಂಧಗಳುಳ್ಳ ಪದ್ಮ ಕುಮುದ ಕೈರವ ಕಲ್ಹಾರಾದಿ ಪುಷ್ಪಭರಿತಗಳಾದ ಜಲ ಲತೆಗಳಿಂದಲೂ, ಯುಕ್ತಗಳಾದ ಸರೋವರಗಳನ್ನೂ, ಅನೇಕವಿಧವಾಗಿ ಪ್ರಕಾಶಿಸುತಲಿರುವ ಕ್ರೀಡಾವನಗಳನ್ನೂ, ಅತಿರಮ್ಯ ಜಲಾಶಯಗಳನ್ನೂ, ಸಕಲಋತುಕಾಲಗಳಲ್ಲಿ ಬೆಳೆಯುವ ಪುಷ್ಪಫಲ ಸಾಂದ್ರಗಳಾದ ವೃಕ್ಷಗಳಿಂದ ಪರಿಶೋಭಿಗಳಾದ ಅನೇಕಾನೇಕ ವಿಹಾರವನಗಳನ್ನೂ ನೋಡಿದವನಾದನು॥—೧೩॥

ಮೂ ॥ ಪಾಂಡುರಾಭಿಃ ಪ್ರತೋಲೀಭಿರುಚ್ಚಾಭಿರಭಿಸಂವೃತಾಂ ।
ಅಟ್ಟಾಲಕಶತಾಕೀರ್ಣಾಂ ಪತಾಕಾಧ್ವಜಮಾಲಿನೀಂ ॥೧೭॥
ತೋರಣೈಃಕಾಂಚನೈರ್ದಿವ್ಯೈರ್ಲತಾಪಙ್ಕ್ತಿವಿಚಿತ್ರಿತೈಃ ।
ದದರ್ಶಹನುಮಾನ್ ಲಂಕಾಂ ದಿವಿದೇವಪುರೀಮಿವ ॥೧೮॥

| ಪದಚ್ಛೇದ | ಅನ್ವಯ |
| --- | --- |
| ಪಾಂಡುರಾಭಿಃ, ಪ್ರತೋಲೀಭಿಃ, ಉಚ್ಚಾಭಿಃ, ಅಭಿಸಂವೃತಾಂ, ಅಟ್ಟಾಲಕಶತಾಕೀರ್ಣಾಂ, ಪತಾಕಾಧ್ವಜಮಾಲಿನೀಂ ॥೧೭॥ ತೋರಣೈಃ, ಕಾಂಚನೈಃ, ದಿವ್ಯೈಃ, ಲತಾಪಂಕ್ತಿ ವಿಚಿತ್ರಿತೈಃ, ದದರ್ಶ, ಹನುಮಾನ್, ಲಂಕಾಂ, ದಿವಿ, ದೇವಪುರೀಂಮಿವ॥೧೮॥ | ಪಾಂಡುರಾಭಿಃ ಉಚ್ಚಾಭಿಃ ಪ್ರತೋಲೀಭಿಃ ಅಭಿಸಂವೃತಾಂ, ಅಟ್ಟಾಲಕಶತಾ ಕೀರ್ಣಾಂ, ಪತಾಕಾಧ್ವಜ ಮಾಲಿನೀಂ॥೧೭॥ ಲತಾಪಂಕ್ತಿ ವಿಚಿತ್ರಿತೈಃ ದಿವ್ಯೈಃ ಕಾಂಚನೈಃ ತೋರಣೈಃ ಉಪಲಕ್ಷಿತಾಂ ದಿವಿದೇವಪುರೀಮಿವ ಸ್ಥಿತಾಂ ಲಂಕಾಂ ಹನುಮಾನ್ ದದರ್ಶ॥೧೮॥ |

ಪಾಂಡುರಾಭಿಃ-ನಿರ್ಮಲಗಳಾಗಿಯೂ, ಉಚ್ಚಾಭಿಃ-ಉತ್ಕೃಷ್ಟಗಳು ಆಗಿರತಕ್ಕ, ಪ್ರತೋಳೀಭಿಃ ಬೀದಿಗಳಿಂದ ಅಭಿಸಂವೃತಾಂ-ಸುತ್ತವರೆಯಲ್ಪಟ್ಟ, ಅಟ್ಟಾಲಿಕ ಶತಾಕೀರ್ಣಾಂ-ಅನೇಕಾನೇಕ ಕೊತ್ತಲುಗಳಿಂದಲೂ ವ್ಯಾಪ್ತಮಾದ, ಪತಾಕಾಧ್ವಜಮಾಲಿನೀಂ-ದೊಡ್ಡದೊಡ್ಡ ಪತಾಕೆಗಳಿಂದಲೂ, ಮತ್ತು ಧ್ವಜಸ್ಥಂಭಗಳೂ ಇವುಗಳ ಪರಂಪರೆಯಿಂದ ಕೂಡಿದ(ಲಂಕಾಂ ದದರ್ಶ-ಲಂಕೆಯನ್ನು ನೋಡಿದನು)॥೧೭॥ ಲತಾಪಙ್ಕ್ತಿವಿಚಿತ್ರಿತೈಃ-ಬಳ್ಳಿಗಳ ಸಾಲುಗಳಿಂದ ವಿಚಿತ್ರವಾಗಿ ಮಾಡಲ್ಪಟ್ಟಿರುವ, ದಿವ್ಯೈಃ-ದೇವಸಂಬಂಧಗಳಾದ, ಕಾಂಚನೈಃ ಸುವರ್ಣನಿರ್ಮಿತಗಳಾದ, ತೋರಣೈಃ-ಮಕರ ತೋರಣಗಳಿಂದ, ಉಪಲಕ್ಷಿತಾಂ-ಕೂಡಿಕೊಂಡಿರುವ, ದಿವಿ-ಸ್ವರ್ಗಲೋಕದಲ್ಲಿರುವ, ದೇವಪುರೀಮಿವಸ್ಥಿತಾಂ-ಅಮರಾವತಿಯೋ ಎಂಬಂತೆ ಕಾಣಿಸುತ್ತಿದ್ದ, ಲಂಕಾಂ-ಲಂಕಾಪಟ್ಟಣವನ್ನು, ಹನುಮಾನ್-ಮಾರುತಿಯು, ದದರ್ಶ-ನೋಡಿದನು ॥೧೮॥

ಈ ಪ್ರಕಾರವಾಗಿ ಆ ಮಾರುತಿಯು ಅತಿ ಮನೋಜ್ಞವಾದ ರಾವಣಬಾಹುಗುಪ್ತವಾದ, ಸ್ವರ್ಣ ಪ್ರಾಕಾರ ಪರಿಶೋಭಿತವಾದ ಕನ್ಯೈದಿಲೀ ಮೊದಲಾದ ಲತಾಭಾರಗಳಿಂದ ಪರಿಷ್ಕರಿಸಲ್ಪಟ್ಟ, ದಿವ್ಯಾಯುಧ ಧಾರಿಗಳಾದ ಸುಭಟರಿಂದ ಸಂರಕ್ಷಿತವಾದ ಕಾಂಚನಮಯ ಪ್ರಾಕಾರ ಪರಿವೃತವಾದ, ಅತಿ ಸ್ವಚ್ಛಗಳಾದ, ಉಜ್ವಲಗಳಾದ ಗ್ರಹಗಳಂತೆಸೆಯುತ್ತಿರುವ ಗೃಹಗಳಿಂದೊಡಗೂಡಿದ, ರಮಣೀಯಕರಗಳಾದ ಬೀದಿಗಳಿಂದು ಪಶೋಭಿತವಾದ, ಅನೇಕ ವಿಚಿತ್ರಕರ ಮಕರತೋರಣಗಳಿಂದಲೂ, ವೈಜಯಂತಿಗಳಿಂದಲೂ, ಧ್ವಜಸ್ತಂಭಗಳಿಂದಲೂ ಪರಿಮಂಡಿತವಾಗಿ ಸ್ವರ್ಗಲೋಕದಲ್ಲಿರುವ ದೇವೇಂದ್ರನ ರಾಜಧಾನಿಯಾದ ಅಮರಾವತಿಯಂತೆ ಕಂಗೊಳಿಸುತ್ತಲಿರುವ ಆ ರಾವಣ ರಾಜಧಾನಿಯಾದ ಲಂಕಾನಗರಿಯನ್ನು ಕಂಡನು ॥೧೭-೧೮॥

ಮೂ। ಗಿರಿಮೂರ್ಧ್ನಿಸ್ಥಿತಾಂಲಂಕಾಂ ಪಾಂಡುರೈರ್ಭವನೈಶ್ಶುಭೈಃ ।
ದದರ್ಶಸಕಪಿಶ್ರೇಷ್ಠಃ ಪುರಮಾಕಾಶಗಂಯಥಾ ॥೧೯॥
ಪಾಲಿತಾಂರಾಕ್ಷಸೇಂದ್ರೇಣ ನಿರ್ಮಿತಾಂವಿಶ್ವಕರ್ಮಣಾ ।
ಪ್ಲವಮಾನಾಮಿವಾಕಾಶೇ ದದರ್ಶಹನುಮಾನ್ಪುರೀಂ ॥೨೦॥
ವಪ್ರಪ್ರಾಕಾರಜಘನಾಂ ವಿಪುಲಾಂಬುವನಾಂಬರಾಂ ।
ಶತಘ್ನೀಶೂಲಕೇಶಾಂತಾ ಮಟ್ಟಾಲಕವತಂಸಕಾಂ ॥೨೧॥

**ಪದಚ್ಛೇದ**

ಗಿರಿಮೂರ್ಧ್ನಿ, ಸ್ಥಿತಾಂ, ಲಂಕಾಂ, ಪಾಂಡುರೈಃ, ಭವನೈಃ, ಶುಭೈಃ, ದದರ್ಶ, ಸಃ, ಕಪಿಶ್ರೇಷ್ಠಃ, ಪುರಂ, ಆಕಾಶಗಂ, ಯಥಾ ॥೧೯॥

ಪಾಲಿತಾಂ, ರಾಕ್ಷಸೇಂದ್ರೇಣ, ನಿರ್ಮಿತಾಂ, ವಿಶ್ವಕರ್ಮಣಾ, ಪ್ಲವಮಾನಾಂ, ಇವ, ಆಕಾಶೇ, ದದರ್ಶ, ಹನುಮಾನ್, ಪುರೀಂ ॥೨೦॥

ವಪ್ರಪ್ರಾಕಾರಜಘನಾಂ, ವಿಪುಲಾಂಬುವನಾಂಬರಾಂ, ಶತಘ್ನೀಶೂಲಕೇಶಾಂತಾಂ, ಅಟ್ಟಾಲಕವತಂಸಕಾಂ ॥೨೧॥

**ಅನ್ವಯ**

ಸಃ, ಕಪಿಶ್ರೇಷ್ಠಃ ಆಕಾಶಗಂ ಪುರಂ ಯಥಾ, ಪಾಂಡುರೈಃ ಭವನೈಃ ಉಪಲಕ್ಷಿತಾಂ, ಗಿರಿಮೂರ್ಧ್ನಿಸ್ಥಿತಾಂ, ಲಂಕಾಂ, ದದರ್ಶ ॥೧೯॥

ಹನುಮಾನ್, ರಾಕ್ಷಸೇಂದ್ರೇಣಪಾಲಿತಾಂ, ವಿಶ್ವಕರ್ಮಣಾನಿರ್ಮಿತಾಂ ಆಕಾಶೇಪ್ಲವಮಾನಾಮಿವಸ್ಥಿತಾಂ, ಪುರೀಂ ದದರ್ಶ ॥೨೦॥

ವಪ್ರಪ್ರಾಕಾರಜಘನಾಂ, ವಿಪುಲಾಂಬುವನಾಂಬರಾಂ, ಶತಘ್ನೀಶೂಲಕೇಶಾಂತಾಂ, ಅಟ್ಟಾಲಕವತಂಸಕಾಂ ॥೨೧॥

ಸಃ ಕಪಿಶ್ರೇಷ್ಠಃ - ಆ ವಾನರೋತ್ತಮನಾದ ಮಾರುತಿಯು, ಆಕಾಶಗಂಪುರಂ ಯಥಾ - ಅಂತರಿಕ್ಷದಲ್ಲಿರುವ ಪುರವೋ ಎಂಬಂತೆ ಇರುವ, ಪಾಂಡುರೈಃ - ಶುಭ್ರಗಳಾದ, ಭವನೈಃ - ಮನೆಗಳಿಂದ, ಉಪಲಕ್ಷಿತಾಂ-ಕೂಡಿಕೊಂಡಿರುವ, ಗಿರಿಮೂರ್ಧ್ನಿ-ತ್ರಿಕೂಟ ಪರ್ವತದ ಶಿಖರದಲ್ಲಿ, ಸ್ಥಿತಾಂ-ಇರುವ, ಲಂಕಾಂ-ಲಂಕಾಪಟ್ಟಣವನ್ನು, ದದರ್ಶ-ಕಂಡನು॥೧೯॥

ರಾಕ್ಷಸೇಂದ್ರೇಣ-ರಾಕ್ಷಸಸಾರ್ವಭೌಮನಾದ ರಾವಣನಿಂದ, ಪಾಲಿತಾಂ-ರಕ್ಷಿಸಲ್ಪಟ್ಟ, ವಿಶ್ವಕರ್ಮಣಾ-ದೇವಶಿಲ್ಪಿಯಾದ ವಿಶ್ವಕರ್ಮನಿಂದ, ನಿರ್ಮಿತಾಂ-ರಚಿಸಲ್ಪಟ್ಟ, ಆಕಾಶೇ-ಅಂತರಿಕ್ಷದಲ್ಲಿ, ಪ್ಲವಮಾನಾಮಿವಸ್ಥಿತಾಂ-ಹಾರಿಹೋಗುತ್ತಿರುವಂತೆ ಕಾಣಿಸುವ, ಪುರೀಂ-ಲಂಕಾಪಟ್ಟಣವನ್ನು, ದದರ್ಶ-ಕಂಡನು ॥೨೦॥

ವಪ್ರಪ್ರಾಕಾರಜಘನಾಂ-ಕೋಟೆಗೆ ಆಧಾರವಾದ ಜಗುಲಿ ಮತ್ತು ಕೋಟೆ ಇವುಗಳೆಂಬ ಕಟಿಪ್ರದೇಶ ಭಾಗವುಳ್ಳಂಥಾ, ವಿಪುಲಾಂಬುವನಾಂಬರಾಂ-ಕೋಟೆಯಸುತ್ತಲೂ ವಿಸ್ತೃತವಾದ ನೀರು ಮತ್ತು ಉದ್ಯಾನವನವೆಂಬ ವಸ್ತ್ರವುಳ್ಳ, ಶತಘ್ನೀಶೂಲಕೇಶಾಂತಾಂ-ಫಿರಂಗಿಗಳು ಮತ್ತು ಶೂಲಾಯುಧಗಳೆಂಬ ತಲೆಕೂದಲುಗಳುಳ್ಳ, ಅಟ್ಟಾಲಕವತಂಸಕಾಂ-ಬುರುಜುಗಳೆಂಬ ಕರ್ಣಾಭರಣಗಳುಳ್ಳ॥೨೧॥

ಟ್ಟಿ

ಮೂ ॥ ಮನಸೇವಕೃತಾಂಲಂಕಾಂ ನಿರ್ಮಿತಾಂವಿಶ್ವಕರ್ಮಣಾ ।
ದ್ವಾರಮುತ್ತರಮಾಸಾದ್ಯ ಚಿಂತಯಾಮಾಸವಾನರಃ ॥೨೨॥
ಕೈಲಾಸಶಿಖರಪ್ರಖ್ಯಾಮಾಲಿಖಂತೀಮಿವಾಂಬರಂ ।
ಡೀಯಮಾನಾಮಿವಾಕಾಶ ಮುಚ್ಛ್ರಿತೈರ್ಭವನೋತ್ತಮೈಃ ॥
ಸಂಪೂರ್ಣಾಂರಾಕ್ಷಸೈರ್ಘೋರೈರ್ನಾಗೈರ್ಭೋಗವತೀಮಿವ ।
ಅಚಿಂತ್ಯಾಂ ಸುಕೃತಾಂ ಸ್ಪಷ್ಟಾಂ ಕುಬೇರಾಧ್ಯುಷಿತಾಂಪುರಾ ॥
ದಂಷ್ಟ್ರಿಭಿರ್ಬಹುಭಿಶ್ಶೂರೈ ಶ್ಶೂಲಪಟ್ಟಿಸಪಾಣಿಭಿಃ ।
ರಕ್ಷಿತಾಂರಾಕ್ಷಸೈರ್ಘೋರೈರ್ಗುಹಾಮಾಶೀವಿಷೈರಿವ ॥
ತಸ್ಯಾಶ್ಚ ಮಹತೀಂಗುಪ್ತಿಂ ಸಾಗರಂಚನಿರೀಕ್ಷ್ಯಸಃ ।
ರಾವಣಂಚರಿಪುಂಘೋರಂ ಚಿಂತಯಾಮಾಸವಾನರಃ ॥೨೩-೨೬॥

ಮನಸಾ, ಇವ, ಕೃತಾಂ, ಲಂಕಾಂ, ನಿರ್ಮಿತಾಂ, ವಿಶ್ವಕರ್ಮಣಾ, ದ್ವಾರಂ, ಉತ್ತರಂ, ಆಸಾದ್ಯ, ಚಿಂತಯಾಮಾಸ, ವಾನರಃ ॥೨೨॥
ಕೈಲಾಸಶಿಖರಪ್ರಖ್ಯಾಂ, ಆಲಿಖಂತೀಂ, ಇವ, ಅಂಬರಂ, ಡೀಯಮಾನಾಂ, ಇವ, ಆಕಾಶಂ, ಉಚ್ಛ್ರಿತೈಃ, ಭವನೋತ್ತಮೈಃ ॥ ಸಂಪೂರ್ಣಾಂ, ರಾಕ್ಷಸೈಃ, ಘೋರೈಃ, ನಾಗೈಃ, ಭೋಗವತೀಂ, ಇವ, ಅಚಿಂತ್ಯಾಂ, ಸುಕೃತಾಂ, ಸ್ಪಷ್ಟಾಂ, ಕುಬೇರಾಧ್ಯುಷಿತಾಂ, ಪುರಾ, ದಂಷ್ಟ್ರಿಭಿಃ, ಬಹುಭಿಃ, ಶೂರೈಃ, ಶೂಲಪಟ್ಟಿಸಪಾಣಿಭಿಃ, ರಕ್ಷಿತಾಂ, ರಾಕ್ಷಸೈಃ, ಘೋರೈಃ, ಗುಹಾಂ, ಆಶೀವಿಷೈಃ, ಇವ, ತಸ್ಯಾಃ, ಚ, ಮಹತೀಂ, ಗುಪ್ತಿಂ, ಸಾಗರಂ, ಚ, ನಿರೀಕ್ಷ್ಯ, ಸಃ, ರಾವಣಂ, ಚ, ರಿಪುಂ, ಘೋರಂ, ಚಿಂತಯಾಮಾಸ, ವಾನರಃ ॥೨೩॥-೨೬॥

ಮನಸಾ ಕೃತಾಮಿವಸ್ಥಿತಾಂ, ವಿಶ್ವಕರ್ಮಣಾ ನಿರ್ಮಿತಾಂ, ಲಂಕಾಂ, ಉತ್ತರಂ, ದ್ವಾರಂ ಆಸಾದ್ಯ, ವಾನರಃ, ಚಿಂತಯಾಮಾಸ ॥೨೨॥
ಕೈಲಾಸ ಶಿಖರಪ್ರಖ್ಯಾಂ, ಅಂಬರಂ ಆಲಿಖಂತೀಮಿವಸ್ಥಿತಾಂ, ಉಚ್ಛ್ರಿತೈಃ ಭವನೋತ್ತಮೈಃ ಆಕಾಶಂಡೀಯಮಾನಾಮಿವಸ್ಥಿತಾಂ, ಘೋರೈಃ ರಾಕ್ಷಸೈಃ ಸಂಪೂರ್ಣಾಂ, ನಾಗೈಃ ಸಂಪೂರ್ಣಾಂ ಭೋಗವತೀಮಿವಸ್ಥಿತಾಂ,ಅಚಿಂತ್ಯಾಂ, ಸುಕೃತಾಂ, ಸ್ಪಷ್ಟಾಂ, ಪುರಾ ಕುಬೇರಾಧ್ಯುಷಿತಾಂ, ದಂಷ್ಟ್ರಿಭಿಃ ಶೂಲ ಪಟ್ಟಿಸ ಪಾಣಿಭಿಃ, ಶೂರೈಃ ಬಹುಭಿಃ ರಾಕ್ಷಸೈಃ, ಘೋರೈಃ ಆಶೀವಿಷೈಃ ಗುಹಾಮಿವ ರಕ್ಷಿತಾಂ, (ಲಂಕಾಂ),ತಸ್ಯಾಃ ಮಹತೀಂ ಗುಪ್ತಿಂಚ, ಸಾಗರಂಚ, ರಿಪುಂ ಘೋರಂ ರಾವಣಂಚ, ನಿರೀಕ್ಷ್ಯ, ಸಃ ವಾನರಃ, ಚಿಂತಯಾಮಾಸ ॥೨೩-೨೬॥

ಮನಸಾ-ಮನಸ್ಸಿನಿಂದ, ಕೃತಾಮಿವಸ್ಥಿತಾಂ-ಮಾಡಲ್ಪಟ್ಟಂತೆ ಕಾಣುತ್ತಿರುವ, ವಿಶ್ವಕರ್ಮಣಾ-ದೇವಶಿಲ್ಪಿಯಿಂದ, ನಿರ್ಮಿತಾಂ-ರಚಿಸಲ್ಪಟ್ಟ, ಲಂಕಾಂ-ಲಂಕಾಪಟ್ಟಣದ, ಉತ್ತರಂ ದ್ವಾರಂ-ಉತ್ತರದಬಾಗಿಲನ್ನು, ಆಸಾದ್ಯ-ಹೊಂದಿ, ವಾನರಃ- ಆ ಮಾರುತಿಯು, ಚಿಂತಯಾಮಾಸ- ಯೋಚಿಸಿದನು ॥೨೨॥
ಕೈಲಾಸಶಿಖರಪ್ರಖ್ಯಾಂ-ಕೈಲಾಸಪರ್ವತದಶಿಖರದಂತೆ ಎಸೆಯುತ್ತಿರುವ, ಅಂಬರಂ-ಆಕಾಶವನ್ನು

ಮೂ ‖ ಆಗತ್ಯಾಪೀಹಹರಯೋ ಭವಿಷ್ಯಂತ್ಯನಿರರ್ಥಕಾಃ ।
ನಹಿಯುದ್ಧೇನವೈಲಂಕಾ ಶಕ್ಯಾ ಜೇತುಂ ಸುರೈರಪಿ ‖೨೭‖

ಪದಚ್ಛೇದ

ಆಗತ್ಯ, ಅಪಿ, ಇಹ, ಹರಯಃ, ಭವಿಷ್ಯಂತಿ, ನಿರರ್ಥಕಾಃ, ನಹಿ, ಯುದ್ಧೇನ, ವೈ, ಲಂಕಾ, ಜೇತುಂ, ಶಕ್ಯಾ ಸುರೈಃ, ಅಪಿ, ‖೨೭‖

ಅನ್ವಯ

ಇಹ, ಹರಯಃ, ಆಗತ್ಯಾಪಿ, ನಿರರ್ಥಕಾಃ, ಭವಿಷ್ಯಂತಿ, ಹಿ, ಲಂಕಾ, ಸುರೈರಪಿ, ಯುದ್ಧೇನ, ಜೇತುಂ, ನಶಕ್ಯಾ ‖೨೭‖

ಆಲಿಖಂತೀಮಿವಸ್ಥಿತಾಂ-ಬರೆಯುತ್ತಲಿದೆಯೋ ಎಂಬಂತೆ ಕಾಣುವ, ಉಚ್ಛ್ರಿತೈಃ-ಉನ್ನತಗಳಾದ ಭವನೋತ್ತಮೈಃ-ಶ್ರೇಷ್ಠಗಳಾದ ಮನೆಗಳಿಂದ, ಆಕಾಶಂ-ಗಗನಮಂಡಲವನ್ನು, ಡೀಯಮಾನಾಮಿವಸ್ಥಿತಾಂ-ಅಪ್ಪಿಕೊಳ್ಳುವದೋ ಎಂಬಂತೆಕಾಣುವ, ಘೋರೈಃ-ಭಯಂಕರರಾದ, ರಾಕ್ಷಸೈಃ-ರಾಕ್ಷಸರಿಂದ, ಸಂಪೂರ್ಣಾಂ-ತುಂಬಿರುವ, ನಾಗೈಃ ಸಂಪೂರ್ಣಾಂ-ಸರ್ಪಗಳಿಂದ ತುಂಬಿದ, ಭೋಗವತೀಮಿವಸ್ಥಿತಾಂ-ನಾಗಲೋಕವೋ ಎಂಬಂತೆ ತೋರ್ಪಡುವ, ಅಚಿಂತ್ಯಾಂ-ಯೋಚಿಸುವದಕ್ಕೂ ಅಸದಳವಾದ ಸುಕೃತಾಂ-ಚನ್ನಾಗಿರಚಿಸಲ್ಪಟ್ಟಿರುವ, ಸ್ಪಷ್ಟಾಂ-ಸುವ್ಯಕ್ತವಾದ. ಪುರಾ-ಪುರಾತನಕಾಲದಲ್ಲಿ, ಕುಬೇರಾಧ್ಯುಷಿತಾಂ-ಕುಬೇರನಿಂದ ಅಧಿಷ್ಠಾನವಮಾಡಲ್ಪಟ್ಟಿದ್ದಂಥಾ, ದ್ರಂಷ್ಟ್ರಿಭಿಃ-ಕೋರದಾಡೆಗಳುಳ್ಳ ಶೂಲ ಪಟ್ಟಸ ಪಾಣಿಭಿಃ-ಶೂಲಾಯುಧ ಪಟ್ಟಿಕತ್ತಿ ಮೊದಲಾದವುಗಳನ್ನು ಸಂತತವಾಗಿ ಹಸ್ತದಲ್ಲಿ ಧರಿಸಿರುವ, ಶೂರೈಃ-ಪರಾಕ್ರಮಶಾಲಿಗಳಿಂದ, ಬಹುಭಿಃ-ಅನೇಕರಾದ, ರಾಕ್ಷಸೈಃ-ರಾಕ್ಷಸರಿಂದ, ಘೋರೈಃ ಭಯಂಕರಗಳಾದ, ಆಶೀವಿಷೈಃ-ಸರ್ಪಗಳಿಂದ-ಗುಹಾಮಿವ-ಗುಹೆಯೋಪಾದಿಯಲ್ಲಿ, ರಕ್ಷಿತಾಂ-ರಕ್ಷಿಸಲ್ಪಟ್ಟಂಥಾ, ಲಂಕಾಂ-ಲಂಕಾಪಟ್ಟಣವನ್ನು. ತಸ್ಯಾಃ- ಆ ಲಂಕಾಪಟ್ಟಣದ, ಮಹತೀಂ-ಮಹತ್ತರವಾದ, ಗುಪ್ತಿಂಚ-ದಕ್ಷಣಕ್ರಮವನ್ನು, ಸಾಗರಂಚ ಸಮುದ್ರವನ್ನು, ರಿಪುಂ-ಶತ್ರುವಾದ, ಘೋರಂ-ಭಯಂಕರನಾದ, ರಾವಣಂಚ-ರಾವಣಾಸುರನನ್ನು, ನಿರೀಕ್ಷ್ಯ-ನೋಡಿ, ಸಃ ವಾನರಃ-ಆ ಮಾರುತಿಯು, ಚಿಂತಯಾಮಾಸ-ಆಲೋಚನೆಮಾಡತೊಡಗಿದನು ‖೨೩-೨೬‖

ಇಹ-ಇಲ್ಲಿ, ಹರಯಃ-ಕಪಿಗಳು, ಆಗತ್ಯಾಪಿ-ಬಂದಾಗ್ಯೂ, ನಿರರ್ಥಕಾಃ-ನಿಷ್ಪ್ರಯೋಜನರಾಗಿ, ಭವಿಷ್ಯಂತಿ-ಆಗುವರು;-ಯಾವಕಾರಣದ ದೆಸೆಯಿಂದ, ಲಂಕಾ-ಲಂಕಾಪಟ್ಟಣವು, ಸುರೈರಪಿ-ದೇವತೆಗಳಿಂದಲೂ ಕೂಡ, ಯುದ್ಧೇನ-ಯುದ್ಧದಿಂದ, ಜೇತುಂ-ಜಯಿಸುವದಕ್ಕೋಸ್ಕರ, ನಶಕ್ಯಾ ಸಾಧ್ಯವಲ್ಲವೋ ‖೨೭‖

ತ್ರಿಕೂಟಾಚಲದ ಶಿಖರದಮೇಲಿರುವ, ಮಂಗಳಕರಗಳಾದ ಸ್ಫಟಿಕಮಣಿ ನಿರ್ಮಿತ ಗೃಹಗಳಿಂದೊಪ್ಪುತ್ತಲಿರುವ, ಅಂತರಿಕ್ಷದಲ್ಲಿ ವರ್ತಿಸುವ ಪಟ್ಟಣದಂತಿರುವ, ವಿಶ್ವಕರ್ಮನೆಂಬ ದೇವತಾಶಿಲ್ಪಿಯಿಂದ ವಿರಚಿತವಾದ, ರಾಕ್ಷಸಚಕ್ರವರ್ತಿಯಾದ ರಾವಣಾಸುರನಿಂದ ಪ್ರಯತ್ನ ಪರಿಪಾಲಿತವಾದ, ಗಗನದಲ್ಲಿ ಹಾರಿಹೋಗುವದಕ್ಕೆ ಸಿದ್ಧವಾಗಿರುವಂತೆ ಕಾಣುತ್ತಲಿರುವ, ಕೋಟೆಗಳೆಂಬ ಕಟಿಪುರೋಭಾಗಗಳಿಂದಲೂ ಸಮುದ್ರ ಜಲವೆಂಬ ವಿಸ್ತಾರವಾದ ವಸ್ತ್ರದಿಂದಲೂ, ಪಿರಂಗಿಶೂಲಗಳೆಂಬ ಕೂದಲುಗಳಿಂದಲೂ, ರಮ್ಯವಾದ ಮೊಗಿಲಟ್ಟಗಳೆಂಬ ಕರ್ಣಾಭರಣಗಳಿಂದಲೂ ಯುಕ್ತವಾಗಿವಿಶ್ವಕರ್ಮನ ಮನಸ್ಸಿನಿಂದ ನಿರ್ಮಿತವಾದ ಅಂಗನೆಯೋಪಾದಿಯಲ್ಲಿರುವ ಲಂಕಾನಗರಿಯನ್ನು ಕಂಡು

Funding: Tattva Heritage and IKS-MoE. Digitization: eGangotri.



ಮೂ॥ ಇಮಾಂತುವಿಷಮಾಂದುರ್ಗಾಂ ಲಂಕಾಂರಾವಣಪಾಲಿತಾಂ ।
ಪ್ರಾಪ್ಯಾಪಿಸಮಹಾಬಾಹುಃ ಕಿಂಕರಿಷ್ಯತಿರಾಘವಃ ॥೨೮॥
ಅವಕಾಶೋನಸಾಂತ್ವಸ್ಯ ರಾಕ್ಷಸೇಷ್ವಭಿಗಮ್ಯತೇ ।
ನದಾನಸ್ಯ ನಭೇದಸ್ಯ ನೈವಯುದ್ಧಸ್ಯದೃಶ್ಯತೇ ೨೯॥

| ಪದಚ್ಛೇದ | ಅನ್ವಯ |
| --- | --- |
| ಇಮಾಂ, ತು, ವಿಷಮಾಂ, ದುರ್ಗಾಂ, ಲಂಕಾಂ, ರಾವಣಪಾಲಿತಾಂ, ಪ್ರಾಪ್ಯ, ಅಪಿ, ಸಃ, ಮಹಾಬಾಹುಃ, ಕಿಂ, ಕರಿಷ್ಯತಿ, ರಾಘವಃ ॥೨೮॥ | ಮಹಾಬಾಹುಃ, ಸಃ, ರಾಘವಃ, ಇಮಾಂ, ವಿಷಮಾಂ, ದುರ್ಗಾಂ, ರಾವಣಪಾಲಿತಾಂ, ಲಂಕಾಂ, ಪ್ರಾಪ್ಯಾಪಿ, ಕಿಂಕರಿಷ್ಯತಿ ॥೨೮॥ |
| ಅವಕಾಶಃ, ನ, ಸಾಂತ್ವಸ್ಯ, ರಾಕ್ಷಸೇಷು, ಅಭಿಗಮ್ಯತೇ, ನ, ದಾನಸ್ಯ, ನ, ಭೇದಸ್ಯ, ನ, ಏವ, ಯುದ್ಧಸ್ಯ, ದೃಶ್ಯತೇ ॥೨೯॥ | ರಾಕ್ಷಸೇಷು, ಸಾಂತ್ವಸ್ಯ, ಅವಕಾಶಃ, ನಾಭಿಗಮ್ಯತೇ, ದಾನಸ್ಯ ಅವಕಾಶಃ ನದೃಶ್ಯತೇ, ಭೇದಸ್ಯ ಅವಕಾಶಃ ನದೃಶ್ಯತೇ, ಯುದ್ಧಸ್ಯ ಅವಕಾಶಃ ನೈವದೃಶ್ಯತೇ ॥೨೯॥ |

ಮಹಾಬಾಹುಃ-ಮಹಾಭುಜಪರಾಕ್ರಮವುಳ್ಳ, ಸಃ, ರಾಘವಃ- ಆ ಶ್ರೀರಾಮನು, ಇಮಾಂ-ದೃಶ್ಯವಾದ, ವಿಷಮಾಂ-ವಿಷಮಸ್ಥಲವಾದಕಾರಣವೇ, ದುರ್ಗಾಂ-ಪ್ರವೇಶಿಸಲಶಕ್ಯವಾದ, ರಾವಣಪಾಲಿತಾಂ-ರಾವಣನಿಂದಪಾಲಿಸಲ್ಪಟ್ಟ, ಲಂಕಾಂ-ಲಂಕಾಪಟ್ಟಣವನ್ನು, ಪ್ರಾಪ್ಯಾಪಿ-ಹೊಂದಿಯೂ ಕೂಡ, ಕಿಂಕರಿಷ್ಯತಿ-ಏನುಮಾಡುವನು ॥೨೮॥

ರಾಕ್ಷಸೇಷು-ರಾಕ್ಷಸರಲ್ಲಿ, ಸಾಂತ್ವಸ್ಯ-ಸಾಮೋಪಾಯಕ್ಕೆ, ಅವಕಾಶಃ-ಆಸ್ಪದವು, ನಾಭಿಗಮ್ಯತೇ-ಹೊಂದಲ್ಪಡುವದಿಲ್ಲ, ದಾನಸ್ಯ-ದಾನೋಪಾಯಕ್ಕೂ, ಅವಕಾಶಃ-ಆಸ್ಪದವು, ನ ದೃಶ್ಯತೇ-ಕಾಣಲ್ಪಡುವದಿಲ್ಲ. ಭೇದಸ್ಯ-ಭೇದೋಪಾಯಕ್ಕೂ, ಅವಕಾಶಃ-ಆಸ್ಪದವು, ನದೃಶ್ಯತೇ, ಯುದ್ಧಸ್ಯ-ಯುದ್ಧಕ್ಕೂ, ಅವಕಾಶಃ-ಸ್ಥಳವು, ನೈವದೃಶ್ಯತೇ-ಕಾಣಲ್ಪಡುವುದೇಇಲ್ಲ ॥೨೯॥

ಆ ಮಾರುತಿಯು ಆ ಪಟ್ಟಣದ ಉತ್ತರ ದಿಕ್ಕಿನಲ್ಲಿರುವ ಊರುಬಾಗಿಲಿನ ಬಳಿಗೆ ಬಂದು ನಿಂತು ಈ ರೀತಿಯಲ್ಲಿ ಯೋಚಿಸಿದನು॥೨೯-೩೦॥

ಕೈಲಾಸ ಪರ್ವತದ ಶೃಂಗದಂತೆ ಪ್ರಕಾಶಿಸುತಲಿರುವ ಗಗನಮಂಡಲವನ್ನು ಜ್ಞಾಪಿಸುತಿರುವ, ಅನೇಕಾನೇಕ ಭವ್ಯ ಭವನಗಳಿಂದಂತರಿಕ್ಷದಲ್ಲಿ ಹಾರಿ ಹೋಗುತಲಿರುವಂತೆ ಕಾಣಿಸುವ, ಅತ್ಯುಗ್ರಸ್ವಭಾವರಾದ ರಾಕ್ಷಸರಿಂದ ಪರಿಪೂರ್ಣವಾದಕಾರಣ ಮಹಾ ಸರ್ಪಗಳಿಂದ ಕೂಡಿದ ಭೋಗವತೀ ಪಟ್ಟಣದಂತೆ ತೋರುವ, ಆಲೋಚಿಸಲಶಕ್ಯವಾದ ಸೌಂದರ್ಯವುಳ್ಳ, ಅತಿ ರಮಣೀಯವಾಗಿ ನಿರ್ಮಾಣ ಮಾಡಲ್ಪಟ್ಟಿರುವ, ಧನಪತಿಯಾದ ಕುಬೇರನಿಂದ ಪೂರ್ವದಲ್ಲಿ ವಾಸಮಾಡಲ್ಪಟ್ಟು ಈಗ ಕೊಳಪಟ್ಟಸಾಧ್ಯಾಯುಧ ಪಾಣಿಗಳಾದ

ಚತುರ್ಣಾಮೇವಹಿ ಗತಿರ್ವಾನರಾಣಾಂ ಮಹಾತ್ಮನಾಂ ||
ವಾಲಿಪುತ್ರಸ್ಯ ನೀಲಸ್ಯ ಮಮರಾಜ್ಞಶ್ಚ ಧೀಮತಃ ||೩೦||

| ಪದಚ್ಛೇದ | ಅನ್ವಯ |
| --- | --- |
| ಚತುರ್ಣಾಂ, ಏವ, ಹಿ, ಗತಿಃ, ವಾನರಾಣಾಂ, ಮಹಾತ್ಮನಾಂ, ವಾಲಿಪುತ್ರಸ್ಯ, ನೀಲಸ್ಯ, ಮಮ, ರಾಜ್ಞಃ, ಚ, ಧೀಮತಃ ||೩೮|| | ಧೀಮತಃ, ರಾಜ್ಞಃ, ವಾಲಿಪುತ್ರಸ್ಯ, ನೀಲಸ್ಯ, ಮಮಚ, ಮಹಾತ್ಮನಾಂ, ಚತುರ್ಣಾಂ ವಾನರಾಣಾಮೇವ, ಗತಿಃ, (ಭವಿತಾ) ||೩೦|| |

ಧೀಮತಃ-ಬುದ್ಧಿಶಾಲಿಯಾದ, ರಾಜ್ಞಃ-ಕಪಿರಾಜನಾದ ಸುಗ್ರೀವನಿಗೂ, ವಾಲಿಪುತ್ರಸ್ಯ-ವಾಲಿಯ ಮಗನಾದ ಅಂಗದನಿಗೂ, ನೀಲಸ್ಯ-ನೀಲನೆಂಬ ಕಪಿ ಸೇನಾನಾಯಕನಿಗೂ, ಮಮಚ-ನನಗೂ, ಮಹಾತ್ಮನಾಂ-ಮಹಾನುಭಾವರಾದ, ಚತುರ್ಣಾಂ ವಾನರಾಣಾಮೇವ-ಈ ನಾಲ್ಕು ಜನ ಕಪಿಗಳಿಗೆನೆ, ಗತಿಃ-ಈಲಂಕಾ ಪ್ರಾಪ್ತಿಯು, ಭವಿತು-ಆದೀತು ||೩೦||

ಕೋರೆದಾಡೆಗಳುಳ್ಳ ಅನೇಕ ರಾಕ್ಷಸಾಗ್ರಣಿಗಳಿಂದ ಪಾಲಿಸಲ್ಪಟ್ಟ, ಕಾರಣ ವಿಷಸರ್ಪಗಳಿಂದ ಸಂಕುಲವಾದ ಪರ್ವತ ಗುಹೆಗಳ ದ್ವಾರದಂತೆ ಕರಾಳವಾದ, ಆ ರಾಕ್ಷಸೇಂದ್ರ ರಾಜಧಾನಿಯ ಪರಿಪಾಲನ ಕ್ರಮವನ್ನು, ಸುತ್ತ ಮುತ್ತಲೂ ವ್ಯಾಪ್ತವಾಗಿರುವ ಸಮುದ್ರವನ್ನು ಕೂಡನೋಡಿ, ಈ ಮಹಾ ನಗರಿಗೆ ಅಧಿಷ್ಠಾತೃವಾದ ಘೋರ ಶತ್ರುವಾದ ದಶಕಂಠನನ್ನು ಸ್ಮರಿಸಿಕೊಂಡು ಈ ಪರಿಯಲ್ಲಿ ಚಿಂತಿಸಿದನು||೨೩-೨೬||

ಈ ಲಂಕಾಪಟ್ಟಣವನ್ನು ದೇವತೆಗಳುಕೂಡ ಯುದ್ಧದಲ್ಲಿ ಜಯಿಸಲಾರರು, ಇಲ್ಲಿಗೆ ಕಪಿಗಳು ಬಂದಾಗ್ಯೂ ಅವರ ಶ್ರಮವು ವ್ಯರ್ಥವಾಗುವದಲ್ಲದೆ ಸಫಲವಾದದ್ದಾಗಲಾರದು. ಶ್ರೀರಾಮನುತಾನೆ ಈ ವಿಷಮವಾದ ಮಹಾನಗರಿಯನ್ನು ಹೇಗೆ ಪ್ರವೇಶಮಾಡ್ಯಾನು ಕಥಂಚಿತ್ ಪ್ರವೇಶಮಾಡಿದಾಗ್ಯೂ ಮುಂದೆ ಏನುಕೆಲಸ ಮಾಡಬಲ್ಲನು ಸರ್ವಥಾ ಅವನ ಶ್ರಮವೂ ವ್ಯರ್ಥವಾಗುವ ಕಾಲ ಒದಗಿತಲ್ಲಾ! ||೨೭-೨೮||

ಮೂರ್ಖರಾದ್ದರಿಂದ ರಾಕ್ಷಸರಲ್ಲಿ ಸಾಮೋಪಾಯವು ನಡೆಯುವದಿಲ್ಲ, ಇವರು ಸ್ವತಃ ಐಶ್ವರ್ಯವಂತರಾದ್ದರಿಂದ ಇವರು ದಾನೋಪಾಯಕ್ಕೆ ಬಗ್ಗುವದಿಲ್ಲ, ಇವರು ಮಾಯಾವಿಗಳಾದ್ದರಿಂದ ಭೇದೋಪಾಯವು ಇವರ ವಿಷಯದಲ್ಲಿ ಕಾರ್ಯಕಾರಿಯಲ್ಲ, ಮಹಾ ಬಲಶಾಲಿಗಳಾದ್ದರಿಂದ ಇವರನ್ನು ಯುದ್ಧದಿಂದ ಗೆಲ್ಲುವದೂ ಸಾಧ್ಯವಲ್ಲ ||೨೯||

ಈ ಮಹಾ ಸಮುದ್ರವನ್ನು ಲಂಘನಮಾಡಿ ಅತಿ ದುರ್ಗಮವಾದ ಈ ಲಂಕಾಪುರಿಯನ್ನು ಹೊಂದಬೇಕಾದರೆ ಕಪಿರಾಜನಾದ ಸುಗ್ರೀವನಿಗೂ, ವಾಲಿಪುತ್ರನಾದ ಅಂಗದನಿಗೂ, ನೀಲನಿಗೂ ನನಗೂ ಸಾಧ್ಯವೇ ಹೊರ್ತು ಇತರರಿಗೆ ಸುಲಭ ಸಾಧ್ಯವಲ್ಲ ||೩೦||

ಮೂ । ಯಾವಜ್ಞಾನಾಮಿವೈದೇಹೀಂ ಯದಿಜೀವತಿವಾನವಾ ॥
ತತ್ರೈವಚಿಂತಯಿಷ್ಯಾಮಿ ದೃಷ್ಟ್ವಾತಾಂಜನಕಾತ್ಮಜಾಂ ।೩೧॥
ತತಸ್ಸಚಿಂತಯಾಮಾಸ ಮುಹೂರ್ತಂಕಪಿಕುಂಜರಃ ।
ಗಿರಿಶೃಂಗೆ ಸ್ಥಿತಸ್ತಸ್ಮಿನ್ರಾಮಸ್ಯಾಭ್ಯುದಯೆರತಃ॥ ೩೨ ॥

| ಪದಚ್ಛೇದ | ಅನ್ವಯ |
|---|---|
| ಯಾವತ್, ಜಾನಾಮಿ, ವೈದೇಹೀ, ಯದಿ, ಜೀವತಿ, ವಾ, ನ, ವಾ, ತತ್ರ, ಏವ, ಚಿಂತಯಿಷ್ಯಾಮಿ, ದೃಷ್ಟ್ವಾ, ತಾಂ, ಜನಕಾತ್ಮಜಾಂ ॥೩೧॥ | ಜೀವತಿವಾ ನವೇತಿ, ವೈದೇಹೀಂ ಜಾನಾಮಿ ಯಾವತ್, ಯದಿಜೀವತಿ, ತಾಂ ಜನಕಾತ್ಮಜಾಂ ದೃಷ್ಟ್ವಾ, ತತ್ರೈವ, ಚಿಂತಯಿಷ್ಯಾಮಿ॥೩೧॥ |
| ತತಃ, ಸಃ, ಚಿಂತಯಾಮಾಸ, ಮುಹೂರ್ತಂ, ಕಪಿಕುಂಜರಃ, ಗಿರಿಶೃಂಗೆ, ಸ್ಥಿತಃ, ತಸ್ಮಿನ್, ರಾಮಸ್ಯ, ಅಭ್ಯುದಯೆ, ರತಃ ॥೩೨॥ | ತತಃ, ಸಃ, ಕಪಿಕುಂಜರಃ, ತಸ್ಮಿನ್, ಗಿರಿಶೃಂಗೆ, ಸ್ಥಿತಃ, ರಾಮಸ್ಯ, ಅಭ್ಯುದಯೆ, ರತಃ, ಮುಹೂರ್ತಂ, ಚಿತಯಾಮಾಸ ॥೩೨॥ |

ಜೀವತಿವಾನವೇತಿ-ಬದುಕಿರುವಳೋ ಇಲ್ಲವೋ ಎಂಬದಾಗಿ, ವೈದೇಹೀಂ-ಜಾನಕಿಯನ್ನು, ಜಾನಾಮಿಯಾವತ್-ನಿಶ್ಚಯವಾಗಿ ತಿಳಿದುಕೊಳ್ಳುತ್ತೇನೆ, ಯದಿಜೀವತಿ-ಬದುಕಿದ್ದರೆ, ತಾಂಜನಕಾತ್ಮಜಾಂ-ಆ ಸೀತಾದೇವಿಯನ್ನು, ದೃಷ್ಟ್ವಾ-ಕಂಡು, ತತ್ರೈವ-ತತ್ಕಾಲದಲ್ಲೇ, ಚಿಂತಯಿಷ್ಯಾಮಿ-ಆಲೋಚಿಸುವೆನು. ॥೩೧॥

ತತಃ-ಅನಂತರದಲ್ಲಿ, ಸಃ ಕಪಿಕುಂಜರಃ-ಆ ಕಪಿ ಪ್ರವರನಾದ ಮಾರುತಿಯು, ತಸ್ಮಿನ್ ಗಿರಿಶೃಂಗೆ-ಆ ಬೆಟ್ಟದ ಶಿಖರಭಾಗದಲ್ಲಿ, ಸ್ಥಿತಃ-ಕುಳಿತವನಾಗಿ, ರಾಮಸ್ಯ-ಶ್ರೀ ರಾಮಚಂದ್ರನ, ಅಭ್ಯುದಯೆ-ಶ್ರೀಯಸ್ಸಿನ ವಿಷಯದಲ್ಲಿ, ರತಃ-ಆಸಕ್ತನಾಗಿ, ಮುಹೂರ್ತಂ-ಸ್ವಲ್ಪಹೊತ್ತು, ಚಿಂತಯಾಮಸ-ಆಲೋಚಿಸಿದನು ॥೩೨॥

ಜಾನಕೀದೇವಿಯು ಜೀವಸಹಿತಳಾಗಿರುತ್ತಾಳೆಯೋ ಇಲ್ಲವೋ ಎಂಬ ಸಂಗತಿಯನ್ನು ಮೊದಲು ತಿಳಿಯುವೆನು, ಜಾನಕಿಯು ಬದುಕಿದಾಳೆಂಬ ವರ್ತಮಾನವು ತಿಳಿದ ಬಳಿಕ ಆಕೆಯನ್ನು ಕಂಡು ಮುಂದೆ ಆಲೋಚಿಸುವೆನು॥೩೧॥

ಶ್ರೀ ರಾಮಚಂದ್ರನ ಅಭ್ಯುದಯದಲ್ಲಿ ಬದ್ಧ ಕಂಕಣನಾದ ಆ ಮಾರುತಿಯು, ಆ ಗಿರಿ ಶೃಂಗದಲ್ಲಿ ಏಕಾಗ್ರಚಿತ್ತದಿಂದ ಕುಳಿತವನಾಗಿ ಒಂದು ಮುಹೂರ್ತಕಾಲ ಈ ರೀತಿಯಲ್ಲಿ ಪರ್ಯಾಲೋಚನೆ ಮಾಡುವನಾದನು॥೩೨॥

ಮೂ॥ ಅನೇನರೂಪೇಣ ಮಯಾನಶಕ್ಯಾರಕ್ಷಸಾಂಪುರೀ ।
ಪ್ರವೇಷ್ಟುಂ ರಾಕ್ಷಸೈರ್ಗುಪ್ತಾ ಕ್ರೂರೈರ್ಬಲಸಮನ್ವಿತೈಃ ॥೩೩॥
ಉಗ್ರೌಜಸೋಮಹಾವೀರ್ಯಾ ಬಲವಂತಶ್ಚ ರಾಕ್ಷಸಾಃ ॥
ವಂಚನೀಯಾಮಯಾಸರ್ವೇ ಜಾನಕೀಂ ಪರಿಮಾರ್ಗತಾ ॥೩೪॥

**ಪದಚ್ಛೇದ**

ಅನೇನ, ರೂಪೇಣ, ಮಯಾ, ನ, ಶಕ್ಯಾ, ರಕ್ಷಸಾಂ, ಪುರೀ, ಪ್ರವೇಷ್ಟುಂ, ರಾಕ್ಷಸೈಃ, ಗುಪ್ತಾ, ಕ್ರೂರೈಃ, ಬಲಸಮನ್ವಿತೈಃ ॥೩೩॥
ಉಗ್ರೌಜಸಃ, ಮಹಾವೀರ್ಯಾಃ, ಬಲವಂತಃ, ಚ, ರಾಕ್ಷಸಾಃ, ವಂಚನೀಯಾಃ, ಮಯಾ, ಸರ್ವೇ ಜಾನಕೀಂ, ಪರಿಮಾರ್ಗತಾ ॥೩೪॥

**ಅನ್ವಯ**

ಕ್ರೂರೈಃ ಬಲಸಮನ್ವಿತೈಃ ರಾಕ್ಷಸೈಃ ಗುಪ್ತಾ, ರಕ್ಷಸಾಂ ಪುರೀ, ಮಯಾ ಅನೇನರೂಪೇಣ ಪ್ರವೇಷ್ಟುಂ ನಶಕ್ಯಾ ॥೩೩॥
ಜಾನಕೀಂ ಪರಿಮಾರ್ಗತಾ ಮಯಾ, ಉಗ್ರೌಜಸಃ, ಮಹಾವೀರ್ಯಾಃ, ಬಲವಂತಃ, ಚ, ರಾಕ್ಷಸಾಃ ಸರ್ವೇ, ವಂಚನೀಯಾಃ ॥೩೪॥

ಕ್ರೂರೈಃ-ಉಗ್ರರಾದ, ಬಲಸಮನ್ವಿತೈಃ-ಶಕ್ತಿಸಂಪನ್ನರಾದ, ರಾಕ್ಷಸೈಃ-ರಾಕ್ಷಸರುಗಳಿಂದ, ಗುಪ್ತಾ-ಸಂರಕ್ಷಿಸಲ್ಪಟ್ಟ, ರಕ್ಷಸಾಂ-ರಾಕ್ಷಸರುಗಳ, ಪುರೀ-ಪಟ್ಟಣವು, ಮಯಾ-ನನ್ನಿಂದ, ಅನೇನ ರೂಪೇಣ-ಈ ರೂಪದಿಂದ, ಪ್ರವೇಷ್ಟುಂ-ಪ್ರವೇಶ ಮಾಡುವುದಕ್ಕೆ,-ನಶಕ್ಯಾ-ಸಾಧ್ಯವಾದದ್ದಲ್ಲ॥೩೩॥
ಜಾನಕೀಂ-ಸೀತಾದೇವಿಯನ್ನು, ಪರಿಮಾರ್ಗತಾ-ಹುಡುಕುತಲಿರುವ, ಮಯಾ-ನನ್ನಿಂದ, ಉಗ್ರೌಜಸಃ-ಕರಾಳತೇಜಸ್ಕರಾದ, ಮಹಾವೀರ್ಯಾಃ-ಅತಿಶಯಿತವಾದ ಪರಾಕ್ರಮವುಳ್ಳ, ಬಲವಂತಃ-ಶಕ್ತಿಸಂಪನ್ನರಾದ, ರಾಕ್ಷಸಾಸ್ಸರ್ವೇ-ರಾಕ್ಷಸರೆಲ್ಲಾ, ವಂಚನೀಯಾಃ-ವಂಚಿಸಲ್ಪಡತಕ್ಕವರಿರುವರು॥೩೪॥

ಅತಿ ಕರಾಳರಾಗಿಯೂ, ಪ್ರಬಲವಾದ ಕಾಯಶಕ್ತಿಯುಳ್ಳವರಾಗಿಯೂ ಇರುವ ರಾಕ್ಷಸರುಗಳು ಈ ಲಂಕೆಯನ್ನು ಸಂತತವಾಗಿ ಕಾಯುತಲಿದಾರೆ, ಈ ನನ್ನ ಸ್ವಾಭಾವಿಕವಾದ ರೂಪದಿಂದ ಈ ನಗರಿಗೆ ಪ್ರವೇಶಮಾಡುವದು ಸಾಧ್ಯವಾಗಿತೋರುವದಿಲ್ಲಾ ॥೩೩॥

ರಾಕ್ಷಸರೆಲ್ಲರೂ ಕ್ರೂರರಾದವರು. ಸ್ವತಃ ಬಾಹುಬಲವುಳ್ಳವರು, ಪ್ರಬಲವೀರ್ಯಯುಕ್ತರಾದವರು; ಮಹಾ ಮಾಯಾವಿಗಳು; ಹೀಗಿರುವಲ್ಲಿ ಇವರ ಮಧ್ಯೆ ನಾನು ಸೀತಾದೇವಿಯನ್ನು ಹುಡುಕುವದಕ್ಕೆ ಪ್ರಯತ್ನ ಮಾಡತಕ್ಕದ್ದು ಸುಲಭವಾಗಿ ಸಾಧ್ಯವಾಗಲಾರದು. ಈ ಕಾರಣದಿಂದ ನನ್ನ ಸ್ವಾಭಾವಿಕ ಕಪಿರೂಪದಿಂದ ಸೀತಾದೇವಿಯನ್ನು ನಾನು ಹುಡುಕಲು ಉದ್ಯಮ ಮಾಡುವುದಕ್ಕೆ ಬದಲಾಗಿ ವಂಚಕರಾದ ರಾಕ್ಷಸರಿಗೆ ವಂಚನೆಯನ್ನುಮಾಡಿ ನಾನು ರೂಪಾಂತರದಿಂದ ಅವರ ಮಧ್ಯದಲ್ಲಿ ಪ್ರವೇಶಮಾಡತಕ್ಕದ್ದೇ ಮೇಲಾಗಿದೆ ॥೩೪॥

ಮೂ॥ ಲಕ್ಷ್ಯಾಲಕ್ಷ್ಯೇಣರೂಪೇಣ ರಾತ್ರೌಲಂಕಾಪುರೀಮಯಾ ।
ಪ್ರವೇಷ್ಟುಂ ಪ್ರಾಪ್ತಕಾಲಂಮೇಕೃತ್ಯಂ ಸಾಧಯಿತುಂಮಹತ್ ೪೫॥
ತಾಂಪುರೀಂ ತಾದೃಶೀಂ ದೃಷ್ಟ್ವಾದುರಾಧರ್ಷಾಂಸುರಾಸುರೈಃ ॥
ಹನೂಮಾಂಶ್ಚಿಂತಯಾಮಾಸ ವಿನಿಶ್ಚಿತ್ಯ ಮುಹುರ್ಮುಹುಃ ॥೪೬॥

**ಪದಚ್ಛೇದ**

ಲಕ್ಷ್ಯಾ ಲಕ್ಷ್ಯೇಣ, ರೂಪೇಣ ರಾತ್ರೌ, ಲಂಕಾಪುರೀ, ಮಯಾ, ಪ್ರವೇಷ್ಟುಂ, ಪ್ರಾಪ್ತಕಾಲಂ ಮೇ, ಕೃತ್ಯಂ, ಸಾಧಯಿತುಂ, ಮಹತ್ ॥೪೫॥

ತಾಂ, ಪುರೀಂ, ತಾದೃಶೀಂ, ದೃಷ್ಟ್ವಾ, ದುರಾಧರ್ಷಾಂ, ಸುರಾಸುರೈಃ, ಹನುಮಾನ್, ಚಿಂತಯಾಮಾಸ, ವಿನಿಶ್ಚಿತ್ಯ, ಮುಹುಃ, ಮುಹುಃ॥೪೬॥

**ಅನ್ವಯ**

ಲಕ್ಷ್ಯಾ ಲಕ್ಷ್ಯೇಣ ರೂಪೇಣ ಮೇ ಮಹತ್ ಕೃತ್ಯಂ ಸಾಧಯಿತುಂ, ರಾತ್ರೌ ಲಂಕಾಪುರೀ ಮಯಾ ಪ್ರವೇಷ್ಟುಂ ಪ್ರಾಪ್ತಕಾಲಂ॥೪೫॥

ಹನುಮಾನ್, ತಾದೃಶೀಂ, ಪುರೀಂ, ದೃಷ್ಟ್ವಾ ತಾಂ ಸುರಾಸುರೈಃ ದುರಾಧರ್ಷಾಂ, ವಿನಿಶ್ಚಿತ್ಯ, ಮುಹುರ್ಮುಹುಃ, ಚಿಂತಯಾಮಾಸ॥೪೬॥

ಲಕ್ಷ್ಯಾ ಲಕ್ಷ್ಯೇಣ-ಕಂಡುಕಾಣದಂತಿರುವ, ರೂಪೇಣ-ಆಕೃತಿಯಿಂದ, ಮೇ-ನನ್ನ, ಮಹತ್ಕೃತ್ಯಂ-ದೊಡ್ಡಕಾರ್ಯವನ್ನು, ಸಾಧಯಿತುಂ-ಸಾಧಿಸುವದಕ್ಕೋಸ್ಕರ, ರಾತ್ರೌ-ರಾತ್ರಿಕಾದಲ್ಲಿ, ಲಂಕಾಪುರೀ-ಲಂಕಾಪಟ್ಟಣವು, ಮಯಾ-ನನ್ನಿಂದಲು, ಪ್ರವೇಷ್ಟುಂ-ಪ್ರವೇಶಮಾಡುವದಕ್ಕೆ, ಪ್ರಾಪ್ತಕಾಲಂ-ಉಚಿತವಾದದ್ದು ॥೪೫॥

ಹನುಮಾನ್-ಮಾರುತಿಯು, ತಾದೃಶೀಂ ಪುರೀಂ-ಆ ಪ್ರಕಾರವಾದ ಲಂಕಾಪಟ್ಟಣವನ್ನು, ದೃಷ್ಟ್ವಾ-ನೋಡಿ, ತಾಂ-ಆ ಲಂಕೆಯನ್ನು, ಸುರಾ ಸುರೈಃ-ದೇವಾಸುರರುಗಳಿಂದ, ದುರಾಧರ್ಷಾಂ-ಆಕ್ರಮಿಸಲ ಸಾಧ್ಯವಾದದನ್ನಾಗಿ, ವಿನಿಶ್ಚಿತ್ಯ-ನಿಶ್ಚಯಮಾಡಿ, ಮುಹುರ್ಮುಹುಃ-ಬಾರಿ ಬಾರಿಗೂ, ಚಿಂತಯಾಮಾಸ-ಯೋಚನೇ ಮಾಡಲುಪಕ್ರಮಿಸಿದನು॥೪೬॥

ಸೀತಾನ್ವೇಷಣವೆಂಬ ಕಾರ್ಯವನ್ನು ಸಾಧಿಸುವದಕ್ಕೋಸ್ಕರ ಕೆಲವುವೇಳೆ ಸ್ಪಷ್ಟವಾಗಿ ಕಾಣಬರುತ್ತಿರುವ ರೂಪದಿಂದಲೂ, ಮತ್ತೊಂದುವೇಳೆ ಅಸ್ಪಷ್ಟವಾಗಿರುವಂತೆಯೂ ಇರುವರೂಪವನ್ನು ಧರಿಸಿಕೊಂಡು ರಾತ್ರಿಯ ವೇಳೆಯಲ್ಲಿ ಈ ಲಂಕಾಪಟ್ಟಣಕ್ಕೆ ಪ್ರವೇಶಮಾಡಿ ನನ್ನ ಕಾರ್ಯವನ್ನು ನೆರವೇರಿಸಿಕೊಳ್ಳುವದು ಉಚಿತವಾದದ್ದೆಂದು ಮಾರುತಿಯು ಯೋಚನೆಯನ್ನು ಮಾಡಿದನು ॥೪೭॥

ಪೂರ್ವೋಕ್ತ ಪ್ರಕಾರವಾದ ಆ ಮಹಾ ನಗರಿಯಾದ ಲಂಕೆಯನ್ನು ಮಾರುತಿಯು ದೃಷ್ಟಿಗೋಚರಮಾಡಿಕೊಂಡು, ದೇವತೆಗೆ ಆಗಲಿ, ಅಸುರರಿಗೆ ಆಗಲಿ, ಈ ನಗರಿಯನ್ನು ಆಕ್ರಮಿಸಿ ವಶಮಾಡಿಕೊಳ್ಳುವದು ಸಾಧ್ಯವಲ್ಲವೆಂದು ನಿರ್ಣಯಮಾಡಿ ಯಾವ ವಿಧದಲ್ಲಿ ಈ ಮಹಾನಗರಿಯು ಶ್ರೀರಾಮಚಂದ್ರನ ವಶವರ್ತಿಯಾಗಬೇಕೆಂದು ಉಪಾಯಗಳನ್ನು ಅನ್ವೇಷಣ ಮಾಡುತ್ತಾ ಪದೇ ಪದೇ ಯೋಚನೆ ಮಾಡುತ್ತಿದ್ದನು ॥೪೮॥

ಮೂ॥ ಕೇನೋಪಾಯೇನಪಶ್ಯೇಯಂ ಮೈಥಿಲೀಂ ಜನಕಾತ್ಮಜಾಂ।
ಅದೃಷ್ಟೋರಾಕ್ಷಸೇಂದ್ರೇಣ ರಾವಣೇನದುರಾತ್ಮನಾ॥ ೩೭ ॥
ನವಿನಶ್ಯೇತ್ಕಥಂಕಾರ್ಯಂ ರಾಮಸ್ಯವಿದಿತಾತ್ಮನಃ।
ಏಕಾಮೇಕಶ್ಚಪಶ್ಯೇಯಂ ರಹಿತೇಜನಕಾತ್ಮಜಾಂ॥ ೩೮ ॥

ಪದಚ್ಛೇದ

ಕೇನ, ಉಪಾಯೇನ, ಪಶ್ಯೇಯಂ, ಮೈಥಿಲೀಂ ಜನಕಾತ್ಮಜಾಂ, ಅದೃಷ್ಟಃ, ರಾಕ್ಷಸೇಂದ್ರೇಣ, ರಾವಣೇನ, ದುರಾತ್ಮನಾ॥೩೭॥

ನ, ವಿನಶ್ಯೇತ್, ಕಥಂ, ಕಾರ್ಯಂ, ರಾಮಸ್ಯ, ವಿದಿತಾತ್ಮನಃ, ಏಕಾಂ, ಏಕಃ, ಚ, ಪಶ್ಯೇಯಂ, ರಹಿತೇ, ಜನಕಾತ್ಮಜಾಂ॥೩೮॥

ಅನ್ವಯ

ದುರಾತ್ಮನಾ ರಾಕ್ಷಸೇಂದ್ರೇಣ, ರಾವಣೇನ, ಅದೃಷ್ಟಃ ಜನಕಾತ್ಮಜಾಂ ಮೈಥಿಲೀಂ ಕೇನ ಉಪಾಯೇನ, ಪಶ್ಯೇಯಂ ॥೩೭॥

ವಿದಿತಾತ್ಮನಃ, ರಾಮಸ್ಯ, ಕಾರ್ಯಂ, ಕಥಮಪಿ, ನವಿನಶ್ಯೇತ್, (ಅತಃ,) ರಹಿತೇ, ಜನಕಾತ್ಮಜಾಂ, ಏಕಾಂ, ಏಕಶ್ಚ ಪಶ್ಯೇಯಂ॥೩೮॥

ದುರಾತ್ಮನಾ-ದುಷ್ಟಾತ್ಮನಾದ, ರಾಕ್ಷಸೇಂದ್ರೇಣ-ರಾಕ್ಷಸಚಕ್ರವರ್ತಿಯಾದ, ರಾವಣೇನ-ರಾವಣನಿಂದ, ಅದೃಷ್ಟಃ-ಕಾಣಲ್ಪಡದಿರುವವನಾಗಿ, ಜನಕಾತ್ಮಜಾಂ-ವಿದೇಹಪುತ್ರಿಯಾದ, ಮೈಥಿಲೀಂ-ಸೀತಾದೇವಿಯನ್ನು, ಕೇನ ಉಪಾಯೇನ-ಯಾವವಿಧವಾದ ಉಪಾಯದಿಂದ, ಪಶ್ಯೇಯಂ-ನೋಡಬಲ್ಲೆನು ॥೩೭॥

ವಿದಿತಾತ್ಮನಃ-ತತ್ತ್ವವನ್ನು ತಿಳಿದಂಥ, ರಾಮಸ್ಯ-ಶ್ರೀರಾಮಚಂದ್ರನ, ಕಾರ್ಯಂ-ಕಾರ್ಯವು, ಕಥಮಪಿ-ಯಾವನಿಮಿತ್ತದಿಂದಲಾದರೂ, ನವಿನಶ್ಯೇತ್-ನಷ್ಟವಾಗಬಾರದು, ಅತಃ-ಈ ಕಾರಣದಿಂದ, ರಹಿತೇ-ಜನಗಳಸಂಬಂಧದಿಂದ ರಹಿತವಾದಸ್ಥಳದಲ್ಲಿ, ಜನಕಾತ್ಮಜಾಂ-ಜನಕಪುತ್ರಿಯಾದಸೀತಾದೇವಿಯನ್ನು ಒಬ್ಬಂಟಿಗಳಾಗಿರುವಾಗ, ಏಕಶ್ಚ-ನಾನು ಏಕಾಕಿಯಾಗಿ, ಪಶ್ಯೇಯಂ-ನೋಡಬೇಕು ॥೩೮॥

ರಾವಣನು ದುರಾತ್ಮನಾದವನು, ಸೀತೆಯನ್ನು ಹುಡುಕುವಾಗ್ಯೆ ನಾನು ಆತನ ದೃಷ್ಟಿ ಗೋಚರ ನಾದರೆ ಕಾರ್ಯಕ್ಕೆ ಉಪಘಾತ ಉಂಟಾಗಬಹುದು ಆದ್ದರಿಂದ ರಾವಣನಿಗೆ ಕಾಣಿಸಿಕೊಳ್ಳದಂತೆ ಸೀತಾದೇವಿಯನ್ನು ನೋಡಬೇಕಾದರೆ ಯಾವ ಉಪಾಯವನ್ನು ಕೈಗೊಳ್ಳಲಿ, ಯಾವ ಉಪಾಯದಿಂದ ರಾವಣನ ದೃಷ್ಟಿಗೆ ಬೀಳದೆ ಸೀತಾದೇವಿಯನ್ನು ನೋಡುವದಕ್ಕಾದೀತು ॥೩೭॥

ಶ್ರೀ ರಾಮನು ಸಮಸ್ತಲೋಕಗಳಲ್ಲಿ ನಡೆಯುವ ಸಕಲ ಪರಮಾರ್ಥಗಳನ್ನು ತಿಳಿದವನು. ಶ್ರೀ ರಾಮನ ಕಾರ್ಯವನ್ನು ಹ್ಯಾಗಾದರೂ ಸಾಧಿಸಬೇಕು. ಅದು ಎಂದಿಗೂ ನಷ್ಟವಾಗಬಾರದು. ಆದಕಾರಣ ನಾನು ವಿಜನಸ್ಥಾನದಲ್ಲಿ ಶ್ರೀ ಸೀತಾದೇವಿಯನ್ನು ಏಕಾಂಗಿಯಾಗಿ ಹೋಗಿ ದರ್ಶನಮಾಡಬೇಕಾಗಿರುತ್ತೆ ॥೩೮॥

30

ಮೂ॥ ಭೂತಾಶ್ಚಾರ್ಥಾವಿಪದ್ಯಂತೆ ದೇಶಕಾಲವಿರೋಧಿತಾಃ।
ವಿಕ್ಲಬಂದೂತಮಾಸಾದ್ಯತಮಸ್ಸೂರ್ಯೋದಯೇಯಥಾ॥ ೩೯ ॥
ಅರ್ಥಾನರ್ಥಾಂತರೇಬುದ್ಧಿರ್ನಿಶ್ಚಿತಾಪಿನಶೋಭತೆ।
ಘಾತಯಂತಿಹಿಕಾರ್ಯಾಣಿದೂತಾಃ ಪಂಡಿತಮಾನಿನಃ॥ ೪೦॥

ಪದಚ್ಛೇದ

ಭೂತಾಃ, ಚ, ಅರ್ಥಾಃ, ವಿಪದ್ಯಂತೆ, ದೇಶ ಕಾಲ ವಿರೋಧಿತಾಃ, ವಿಕ್ಲಬಂ, ದೂತಂ, ಆಸಾದ್ಯ, ತಮಃ, ಸೂರ್ಯೋದಯೆ, ಯಥಾ॥೩೯॥

ಅರ್ಥಾನರ್ಥಾಂತರೆ, ಬುದ್ಧಿಃ, ನಿಶ್ಚಿತಾ, ಅಪಿ, ನ, ಶೋಭತೆ, ಘಾತಯಂತಿ, ಹಿ, ಕಾರ್ಯಾಣಿ, ದೂತಾಃ, ಪಂಡಿತಮಾನಿನಃ॥೪೦॥

ಅನ್ವಯ

ಅರ್ಥಾಃ ಭೂತಾಶ್ಚ, ದೇಶಕಾಲ ವಿರೋಧಿತಾಃ, ವಿಕ್ಲಬಂ ದೂತಂ ಆಸಾದ್ಯ, ಸೂರ್ಯೋದಯೆ ತಮಃಯಥಾ, ವಿಪದ್ಯಂತೆ ॥೩೯॥

ಅರ್ಥಾನರ್ಥಾಂತರೆ, ನಿಶ್ಚಿತಾಪಿ, ಬುದ್ಧಿಃ (ವಿಕ್ಲಬಂ, ದೂತಂ, ಆಸಾದ್ಯ,) ನಶೋಭತೆ; ಹಿ, ಪಂಡಿತಮಾನಿನಃ ದೂತಾಃ, ಕಾರ್ಯಾಣಿ, ಘಾತಯಂತಿ॥೪೦॥

ಅರ್ಥಾಃ-ಪ್ರಯೋಜನಗಳು, ಭೂತಾಶ್ಚ-ಸಿದ್ಧಗಳಾದಾಗ್ಯೂ, ದೇಶಕಾಲವಿರೋಧಿತಾಃ-ದೇಶದಿಂದ ಲೂ ಕಾಲದಿಂದಲೂ ವಿರೋಧಿಸಲ್ಪಟ್ಟು, ವಿಕ್ಲಬಂ-ವಿಹ್ವಲನಾದ, ದೂತಂ-ಸೇವಕನನ್ನು, ಆಸಾದ್ಯ-ಹೊಂದಿ, ಸೂರ್ಯೋದಯೆ-ಸೂರ್ಯದೇವನು ಉದಯಿಸಲಾಗಿ, ತಮಃ ಯಥಾ-ಕತ್ತಲೆಯೋಪಾದಿಯಲ್ಲಿ ವಿಪದ್ಯಂತೆ-ವಿನಾಶವನ್ನು ಹೊಂದುತ್ತವೆ ॥೩೯॥

ಅರ್ಥಾನರ್ಥ-ಕಾರ್ಯಾಕಾರ್ಯಗಳ, ಅಂತರೆ-ಮಧ್ಯದಲ್ಲಿ, ನಿಶ್ಚಿತಾಪಿ-ಮಂತ್ರಾಲೋಚನೆಯಿಂದ ನಿರ್ಣಯಿಸಲ್ಪಟ್ಟದಾದರೂ, ಬುದ್ಧಿಃ-ಬುದ್ಧಿಯು, ವಿಕ್ಲಬಂ-ಅವಿವೇಕಿಯಾದ, ದೂತಂ-ದೂತನನ್ನು, ಆಸಾದ್ಯ-ಹೊಂದಿ, ನಶೋಭತೆ-ಪ್ರಕಾಶಿಸುವದಿಲ್ಲ; ಹಿ-ಯಾವಕಾರಣವದೆಸೆಯಿಂದ, ಪಂಡಿತಮಾನಿನಃ-ನಾವೇಪಂಡಿತರೆಂಭಾವಿಸುವ, ದೂತಾಃ-ಸಂದೇಶಹಾರಿಗಳು, ಕಾರ್ಯಾಣಿ-ರಾಜಕಾರ್ಯಗಳನ್ನು, ಘಾತಯಂತಿ-ನಾಶಪಡಿಸುತ್ತಾರೆ ॥೪೦॥

ಲೋಕದಲ್ಲಿ ಕೈಗೂಡಿದ ಪ್ರಯೋಜನಗಳಾದಾಗ್ಯೂ ದೇಶಕಾಲ ವಿರುದ್ಧಗಳಾಗಿಯೂ ಅಧೀರನಾದ ದೂತನಲ್ಲಿ ಸಿಕ್ಕಿದವುಗಳಾಗಿಯೂ ಆದರೆ ಆ ಪ್ರಯೋಜನಗಳು ಸೂರ್ಯೋದಯಮಾತ್ರದಿಂದ ಕತ್ತಲೆಯು ಹ್ಯಾಗೆ ನಶಿಸಿಹೋಗುವದೋ ಅದೇರೀತಿಯಲ್ಲಿ ಅತಿ ಕ್ಷಿಪ್ರದಲ್ಲಿ ನಶಿಸಿ ಹೋಗುವವು॥೩೯॥

ಇದು ಕಾರ್ಯ ಇದು ಅಕಾರ್ಯವೆಂಬ ವಿಷಯದಲ್ಲಿ ರಾಜರಿಂದಲೂ ನೀತಿ ಕುಶಲರಾದ ಮಂತ್ರಿಗಳಿಂದಲೂ, ನಿರ್ಣಯಿಸಲ್ಪಟ್ಟ ಸಂಗತಿಗಳೂಕೂಡ ಅವಿವೇಕಿಯಾದ ದೂತನಿಂದ ಕೆಡುವದು; ಸ್ವಯಂ ಮೂರ್ಖರಾದ ಪಂಡಿತಮ್ಮನ್ಯರಾದ ದೂತರು ರಾಜಕಾರ್ಯಗಳನ್ನು ತಾವು ನಿರ್ವಹಿಸುತ್ತೇವೆಂದುಕೈಗೊಂಡು ಕೊನೆಗೆ ಅವುಗಳನ್ನು ವಿನಾಶ ಪಡಿಸುತ್ತಾರಲ್ಲದೆ ಕೈಗೂಡಿಸುವದಿಲ್ಲ॥೪೦॥

ಮೂ॥ ನವಿನಶ್ಯೇತ್ಕಥಂಕಾರ್ಯಂ ವೈಕ್ಲಬ್ಯಂನಕಥಂಭವೇತ್।
ಲಂಘನಂಚಸಮುದ್ರಸ್ಯ ಕಥಂನುನವೃಥಾ ಭವೇತ್॥ ೪೧ ॥
ಮಯಿದೃಷ್ಟೇತುರಕ್ಷೋಭೀ ರಾಮಸ್ಯವಿದಿತಾತ್ಮನಃ।
ಭವೇದ್ವ್ಯರ್ಥಮಿದಂಕಾರ್ಯಂ ರಾವಣಾನರ್ಥಮಿಚ್ಛತಃ॥ ೪೨ ॥

**ಪದಚ್ಛೇದ**

ನ, ವಿನಶ್ಯೇತ್, ಕಥಂ, ಕಾರ್ಯಂ, ವೈಕ್ಲಬ್ಯಂ, ನ, ಕಥಂ, ಭವೇತ್, ಲಂಘನಂ, ಚ, ಸಮುದ್ರಸ್ಯ, ಕಥಂ, ನು, ನ, ವೃಥಾ, ಭವೇತ್ ॥೪೧॥

ಮಯಿ, ದೃಷ್ಟೇ, ತು, ರಕ್ಷೋಭಿಃ, ರಾಮಸ್ಯ, ವಿದಿತಾತ್ಮನಃ, ಭವೇತ್, ವ್ಯರ್ಥಂ, ಇದಂ, ಕಾರ್ಯಂ, ರಾವಣಾನರ್ಥಂ, ಇಚ್ಛತಃ ॥೪೨॥

**ಅನ್ವಯ**

ಕಾರ್ಯಂ ಕಥಂ ನವಿನಶ್ಯೇತ್, (ಮೇ), ವೈಕ್ಲಬ್ಯಂ, ಕಥಂ, ನಭವೇತ್, ಸಮುದ್ರಸ್ಯ ಲಂಘನಂಚ, ಕಥಂನು, ವೃಥಾನ ಭವೇತ್(ತಥಾ ಕರ್ತವ್ಯಂ) ॥೪೧॥

ಮಯಿ, ರಕ್ಷೋಭಿಃ, ದೃಷ್ಟೇಸತಿ, ವಿದಿತಾತ್ಮನಃ, ರಾವಣಾನರ್ಥಂ, ಇಚ್ಛತಃ, ರಾಮಸ್ಯ, ಇದಂ ಕಾರ್ಯಂ, ವ್ಯರ್ಥಂ ಭವೇತ್ ॥೪೨॥

ಕಾರ್ಯಂ-ರಾಮಕಾರ್ಯವು, ಕಥಂ-ಹ್ಯಾಗೆ, ನವಿನಶ್ಯೇತ್-ನಷ್ಟವಾಗದಿರುವದೋ, ಮೇ-ನನಗೆ, ವೈಕ್ಲಬ್ಯಂ-ಅವಿವೇಕಿತನವು, ಕಥಂ-ಹ್ಯಾಗೆ, ನಭವೇತ್-ಆಗದಿರುವದೋ,ಸಮುದ್ರಸ್ಯ-ಮಹೋದಧಿಯ, ಲಂಘನಂಚ-ದಾಟುವಿಕೆಯೂ ಕೂಡ, ಕಥಂನು-ಹ್ಯಾಗೆತಾನೆ, ವೃಥಾ-ವ್ಯರ್ಥವಾಗಿ, ನಭವೇತ್-ಆಗದಿರುವದೋ, ತಥಾ-ಹಾಗೆ, ಕರ್ತವ್ಯಂ-ಮಾಡತಕ್ಕದ್ದಾಗಿದೆ ॥೪೧॥

ಮಯಿ-ನಾನು, ರಕ್ಷೋಭಿಃ-ದೈತ್ಯರಿಂದ, ದೃಷ್ಟೇಸತಿ-ಕಾಣಲ್ಪಟ್ಟವನಾಗುತ್ತಿರಲಾಗಿ, ವಿದಿತಾತ್ಮನಃ-ವಿದಿತ-ತಿಳಿಯಲ್ಪಟ್ಟ, ಆತ್ಮನಃ-ಸ್ವಭಾವವುಳ್ಳ, ರಾವಣಾನರ್ಥಂ-ರಾವಣಾಸುರನಿಗೆ ಅನರ್ಥವನ್ನು, ಇಚ್ಛತಃ-ಇಚ್ಛೈಸುತಲಿರುವ, ರಾಮಸ್ಯ-ಶ್ರೀರಾಮನಿಗೆ, ಇದಂ ಕಾರ್ಯಂ-ಈ ಸೀತಾನ್ವೇಷಣವೆಂಬಕಾರ್ಯವು, ವ್ಯರ್ಥಂ-ನಿಷ್ಫಲವಾದದ್ದಾಗಿ, ಭವೇತ್-ಆದೀತು ॥೪೨॥

ಆದ್ದರಿಂದ ಸೀತಾ ದರ್ಶನ ರೂಪವಾದ ಕಾರ್ಯವು ಹ್ಯಾಗೆ ಸಿದ್ಧಿಸೀತು, ಮತ್ತು ನಾನು ಅವಿವೇಕಿಎಂಬ ಅಪವಾದಕ್ಕೆ ಗುರಿಯಾಗದಿರುವ ಬಗೆ ಹ್ಯಾಗೆ, ಶತಯೋಜನ ವಿಸ್ತೃತವಾದ ಈ ಮಹಾ ಸಾಗರದ ಉಲ್ಲಂಘನವು ಹ್ಯಾಗೆತಾನೆ ಸಾರ್ಥಕವಾದೀತು, ಇದೆಲ್ಲಾ ಸರಿಯಾಗಿ ನೆರವೇರ ಬೇಕಾದ್ದಕ್ಕೆ ಪ್ರಕೃತದಲ್ಲಿ ನಾನು ಬಹು ಜಾಗರೂಕನಾಗಿ ಕಾರ್ಯ ಮಾಡಬೇಕಾಗಿದೆ ॥೪೧॥

ರಾಕ್ಷಸರು ನನ್ನನ್ನು ಕಂಡರೆ ಮಹತ್ತಾದ ಅನರ್ಥಕ್ಕೆ ಕಾರಣವಾದೀತು. ರಾಮಕಾರ್ಯಕ್ಕೆ ಭಂಗ ಉಂಟಾದೀತು ಶ್ರೀ ರಾಮನು ಸತ್ಯಸಂಧನು ರಾವಣನನ್ನು ನಿಗ್ರಹಿಸಲು ಅಪೇಕ್ಷೆಯುಳ್ಳವನಾಗಿ ಸಮಯ ನಿರೀಕ್ಷಣೆಯಲ್ಲಿರುತ್ತಾನೆ. ಈಗ ನಾನು ಈ ನನ್ನ ಸ್ಥೂಲರೂಪದಿಂದ ರಾಕ್ಷಸರಿಗೆ ಗೋಚರನಾದರೆ ಶ್ರೀ ರಾಮ ಕಾರ್ಯಕ್ಕೆ ಭಂಗವಾದೀತೆ ಹೊರ್ತು ಅನ್ಯಥಾ ಇಲ್ಲ ॥೪೨॥

ಮೂ ॥ ನಹಿಶಕ್ಯಂಕ್ವಚಿತ್ಸ್ಥಾತುಮವಿಜ್ಞಾತೇನರಾಕ್ಷಸೈಃ।
ಅಪಿರಾಕ್ಷಸರೂಪೇಣ ಕಿಮುತಾನ್ಯೇನಕೇನಚಿತ್॥ ೪೩ ॥
ವಾಯುರಪ್ಯತ್ರನಜ್ಞಾತಶ್ಚರೇದಿತಿಮತಿರ್ಮಮ॥
ನಹ್ಯಸ್ತ್ಯವಿದಿತಂಕಿಂಚಿದ್ರಾಕ್ಷಸಾನಾಂಬಲೀಯಸಾಂ॥ ೪೪ ॥

**ಪದಚ್ಛೇದ**

ನಹಿ, ಶಕ್ಯಂ, ಕ್ವಚಿತ್, ಸ್ಥಾತುಂ, ಅವಿಜ್ಞಾತೇನ, ರಾಕ್ಷಸೈಃ, ಅಪಿ ರಾಕ್ಷಸ ರೂಪೇಣ, ಕಿಮುತ ಅನ್ಯೇನ, ಕನಚಿತ್ ॥೪೩॥

ವಾಯುಃ, ಅಪಿ, ಅತ್ರ, ನಜ್ಞಾತಃ, ಚರೇತ್, ಇತಿ, ಮತಿಃ, ಮಮ, ನಹಿ, ಅಸ್ತಿ, ಅವಿದಿತಂ, ಕಿಂಚಿತ್, ರಾಕ್ಷಸಾನಾಂ, ಬಲೀಯಸಾಂ, ॥೪೪॥

**ಅನ್ವಯ**

ರಾಕ್ಷಸೈಃ ಅವಿಜ್ಞಾತೇನ, ರಾಕ್ಷಸರೂಪೇಣಾಪಿ, ಕ್ವಚಿತ್ಸ್ಥಾತುಂ ನಹಿ ಶಕ್ಯಂ, ಕಿಮುತ ಅನ್ಯೇನ ಕೇನಚಿತ್ ॥೪೩॥

ಬಲೀಯಸಾಂ ರಾಕ್ಷಸಾನಾಂ ಅವಿದಿತಂ ಕಿಂಚಿದಪಿ ನಹ್ಯಸ್ತಿ, ಅತ್ರ ವಾಯುರಪಿ ನಜ್ಞಾತಃ ಚರೇತ್ ಇತಿ ಮಮ ಮತಿಃ ॥೪೪॥

ರಾಕ್ಷಸೈಃ-ರಾಕ್ಷಸರಿಂದ, ಅವಿಜ್ಞಾತೇನ-ತಿಳಿಯಲ್ಪಡದೆ ಇರತಕ್ಕ, ರಾಕ್ಷಸರೂಪೇಣಾಪಿ-ರಾಕ್ಷಸರೂಪದಿಂದಲೂಕೂಡ, ಕ್ವಚಿತ್-ಪ್ರೊಂದಾನೊಂದುಕಡೆಯಲ್ಲಿ, ಸ್ಥಾತುಂ-ನಿಲ್ಲುವದಕ್ಕೋಸ್ಕರ,ನಹಿಶಕ್ಯಂ-ಸಾಧ್ಯವಾದದ್ದಲ್ಲ. ಅನ್ಯೇನಕೇನಚಿತ್-ಬೇರೆಮತ್ತೊಂದುರೂಪದಿಂದ, ಕಿಮುತ-ಹೇಳತಕ್ಕದ್ದೇನಿದೆ ॥೪೩॥

ಬಲೀಯಸಾಂ-ಬಲಶಾಲಿಗಳಾದ, ರಾಕ್ಷಸಾನಾಂ-ರಾಕ್ಷಸರುಗಳಿಗೆ, ಅವಿದಿತಂ-ತಿಳಿಯದೆ ಇರತಕ್ಕ ಅಂಶವು, ಕಿಂಚಿದಪಿ-ಸ್ವಲ್ಪವೂ ಕೂಡ, ನಹ್ಯಸ್ತಿ-ಇರುವುದಿಲ್ಲ, ಅತ್ರ-ಈ ಲಂಕಾಪಟ್ಟಣದಲ್ಲಿ, ವಾಯುರಪಿ-ಗಾಳಿಯೂ ಕೂಡ, ನಜ್ಞಾತಃ-ಇತರರಿಗೆ ಕಾಣಿಸಿಕೊಳ್ಳಲ್ಪಡದೆಯಿರುವವನಾಗಿ, ಚರೇತ್-ಸಂಚಾರಮಾಡಬ್ಯಾಸು, ಇತಿ-ಹೀಗೆಂದು, ಮಮ, ನನಗೆ, ಮತಿಃ-ಬುದ್ಧಿಯು ॥೪೪॥

ರಾಕ್ಷಸರಿಗೆ ಸರ್ವಥಾ ಗೋಚರಕ್ಕೆ ಬಾರದಂತೆ ರಾಕ್ಷಸ ರೂಪದಿಂದ ಸಂಚರಿಸುತ್ತಲಿದ್ದಾಗ್ಯೂ, ಯಲ್ಲಿಯೂ ನಿಲ್ಲಲಸಾಧ್ಯ, ಹೀಗಿರುವಲ್ಲಿ, ಮತ್ತೊಂದು ಯಾವದಾದರೂ ಬೇರೆ ವೇಷದಿಂದ ನಿಲ್ಲಲು ಸಾಧ್ಯವಾದೀತೇ ॥೪೩॥

ರಾಕ್ಷಸರುಗಳಾದರೊ ಬಲವತ್ತರವಾದವರು; ಅವರಿಗೆ ತಿಳಿಯದೆ ಇರುವ ಸಂಗತಿಯು ಯಾವದೂ ಇರುವದಿಲ್ಲ. ರಾವಣ ರಾಜಧಾನಿಯಾದ ಈ ಲಂಕೆಯಲ್ಲಿ ಸದಾಗತಿಯಾದ ವಾಯುವೂಕೂಡ ರಾಕ್ಷಸರಿಗೆ ಅಂಜಿಕೊಂಡು ಯಾರಿಗೂ ದೃಷ್ಟಿ ಗೋಚರನಾಗದಂತೆ ಸಂಚಾರ ಮಾಡ ಬೇಕಾಗಿದೆ ಎಂದುನಾನುಊಹಿಸುತ್ತೇನೆ॥೪೪॥

ಮೂ ॥ ಇಹಾಹಂಯದಿತಿಷ್ಠಾಮಿಸ್ವೇನರೂಪೇಣಸಂವೃತಃ।
ವಿನಾಶಮುಪಯಾಸ್ಯಾಮಿ ಭರ್ತುರರ್ಥಶ್ಚ ಹೀಯತೇ॥ ೪೫ ॥
ತದಹಂಸ್ವೇನರೂಪೇಣ ರಜನ್ಯಾಂಹ್ರಸ್ವತಾಂಗತಃ।
ಲಂಕಾಮಧಿಪತಿಷ್ಯಾಮಿರಾಘವ ಸ್ಯಾರ್ಥಸಿದ್ಧಯೇ॥ ೪೬ ॥

**ಪದಚ್ಛೇದ**

ಇಹ, ಅಹಂ, ಯದಿ, ತಿಷ್ಠಾಮಿ ಸ್ವೇನ, ರೂಪೇಣ, ಸಂವೃತಃ, ಯದಿ, ವಿನಾಶಂ, ಉಪಯಾಸ್ಯಾಮಿ, ಭರ್ತುಃ, ಅರ್ಥಃ, ಚ, ಹೀಯತೇ ॥೪೫॥

ತತ್, ಅಹಂ, ಸ್ವೇನ, ರೂಪೇಣ, ರಜನ್ಯಾಂ, ಹ್ರಸ್ವತಾಂ ಗತಃ, ಲಂಕಾಂ, ಅಧಿಪತಿಷ್ಯಾಮಿ, ರಾಘವಸ್ಯ, ಅರ್ಥಸಿದ್ಧಯೇ ॥೪೬॥

**ಅನ್ವಯ**

ಇಹ, ಅಹಂ, ಸ್ವೇನ ರೂಪೇಣ ಸಂವೃತಃ ತಿಷ್ಠಾಮಿ, ಯದಿ, ವಿನಾಶಂ ಉಪಯಾಸ್ಯಾಮಿ, ಭರ್ತುಃ, ಅರ್ಥಶ್ಚ, ಹೀಯತೇ ॥೪೫॥

ತತ್, ಅಹಂ, ರಾಘವಸ್ಯ, ಅರ್ಥಸಿದ್ಧಯೇ, ಹ್ರಸ್ವತಾಂ, ಗತಃ, ಸ್ವೇನರೂಪೇಣ ರಜನ್ಯಾಂ-ಲಂಕಾಂ, ಅಧಿಪತಿಷ್ಯಾಮಿ ॥೪೬॥

ಇಹ- ಈ ಸ್ಥಾನದಲ್ಲಿ, ಅಹಂ-ನಾನು, ಸ್ವೇನ-ನನ್ನ ಸ್ವಕೀಯವಾದ, ರೂಪೇಣ-ಆಕಾರದಿಂದ, ಸಂವೃತಃ-ಕೂಡಿಕೊಂಡವನಾಗಿ, ತಿಷ್ಠಾಮಿ ಯದಿ-ನಿಂತದ್ದೇ ಆದರೆ, ವಿನಾಶಂ-ನಾಶವನ್ನು, ಉಪಯಾಸ್ಯಾಮಿ-ಹೊಂದುವೆನು, ಭರ್ತುಃ-ಸ್ವಾಮಿಯಾದ ಶ್ರೀರಾಮನ, ಅರ್ಥಶ್ಚ-ಪ್ರಯೋಜನವೂ ಕೂಡ, ಹೀಯತೇ, ನಷ್ಟವಾದದ್ದಾಗುತ್ತದೆ ॥೪೫॥

ತತ್-ಆಕಾರಣದಿಂದ, ಅಹಂ-ನಾನು, ರಾಘವಸ್ಯ-ಶ್ರೀರಾಮನ, ಅರ್ಥಸಿದ್ಧಯೇ-ಪ್ರಯೋಜನಸಿದ್ಧಿಗೋಸ್ಕರ, ಹ್ರಸ್ವತಾಂ-ಸೂಕ್ಷ್ಮಭಾವವನ್ನು, ಗತಃ-ಹೊಂದಿದವನಾಗಿ, ಸ್ವೇನರೂಪೇಣ-ನನ್ನ ಸ್ವಕೀಯವಾದ ಆಕಾರದಿಂದ, ರಜನ್ಯಾಂ-ರಾತ್ರಿಯಲ್ಲಿ, ಲಂಕಾಂ-ಲಂಕಾಪಟ್ಟಣವನ್ನು, ಅಧಿಪತಿಷ್ಯಾಮಿ-ಪ್ರವೇಶಿಸುತ್ತೇನೆ ॥೪೬॥

ನನ್ನ ಸ್ವಾಭಾವಿಕವಾದ ಈ ರೂಪದಿಂದ ನಾನು ಇಲ್ಲಿನಿಂತದ್ದೇ, ಆದರೆ ರಾಕ್ಷಸರು ಸರ್ವದಾ ನನ್ನನ್ನು ಅನರ್ಥಕ್ಕೆ ಗುರಿ ಮಾಡ್ಯಾರು ಇದಲ್ಲದೆ ನನ್ನ ಧಣಿಯಾದ ಶ್ರೀ ರಾಮನ ಕಾರ್ಯಕ್ಕೂಕೂಡ ಕುಂದಕ ಉಂಟಾದೀತು ॥೪೫॥

ಈ ರೀತಿಯಲ್ಲಿ ಪರಾಮರ್ಶೆ ಮಾಡಿದ ಕಾರಣಗಳಿಂದ, ಶ್ರೀ ರಾಮನ ಕಾರ್ಯವನ್ನು ನೆರವೇರಿಸುವದಕ್ಕೋಸ್ಕರ, ಪ್ರಥಮತಃ ಸೂಕ್ಷ್ಮ ರೂಪವನ್ನು ತಾಳಿ ಅನಂತರ ನನ್ನ ಸ್ವಂತವಾದ ಆಕಾರವನ್ನು ತಾಳಿ ರಾತ್ರಿ ವೇಳೆಯಲ್ಲಿ ಲಂಕಾ ಪಟ್ಟಣವನ್ನು ಪ್ರವೇಶ ಮಾಡುತ್ತೇನೆ ॥೪೬॥

ಮೂ ॥ ರಾವಣಸ್ಯಪುರೀಂರಾತ್ರೌ ಪ್ರವಿಶ್ಯಸುದುರಾಸದಾಂ।
ವಿಚಿನ್ವನ್ಭವನಂಸರ್ವಂದ್ರಕ್ಷ್ಯಾಮಿಜನಕಾತ್ಮಜಾಂ॥ ೪೭ ॥
ಇತಿಸಂಚಿಂತ್ಯಹನುಮಾನ್ ಸೂರ್ಯಸ್ಯಾಸ್ತಮಯಂಕಪಿಃ।
ಆಚಕಾಂಕ್ಷೇತದಾವೀರೋ ವೈದೇಹ್ಯಾದರ್ಶನೋತ್ಸುಕಃ॥ ೪೮ ॥

ಪದಚ್ಛೇದ

ರಾವಣಸ್ಯ, ಪುರೀಂ, ರಾತ್ರೌ, ಪ್ರವಿಶ್ಯ, ಸುದುರಾಸದಾಂ, ವಿಚಿನ್ವನ್, ಭವನಂ, ಸರ್ವಂ, ದ್ರಕ್ಷ್ಯಾಮಿ, ಜನಕಾತ್ಮಜಾಂ ॥೪೭॥
ಇತಿ, ಸಂಚಿಂತ್ಯ, ಹನುಮಾನ್, ಸೂರ್ಯಸ್ಯ ಅಸ್ತಮಯಂ, ಕಪಿಃ, ಆಚಕಾಂಕ್ಷೇ, ತದಾ, ವೀರಃ, ವೈದೇಹ್ಯಾಃ, ದರ್ಶನೋತ್ಸುಕಃ ॥೪೮॥

ಅನ್ವಯ

ಸುದುರಾಸದಾಂ, ರಾವಣಸ್ಯ ಪುರೀಂ, ರಾತ್ರೌ ಪ್ರವಿಶ್ಯ, ಸರ್ವಂ ಭವನಂ ವಿಚಿನ್ವನ್, ಜನಕಾತ್ಮಜಾಂ ದ್ರಕ್ಷ್ಯಾಮಿ ॥೪೭॥
ತದಾ, ವೀರಃ, ಕಪಿಃ, ಹನುಮಾನ್, ಇತಿ ಸಂಚಿಂತ್ಯ, ವೈದೇಹ್ಯಾಃ, ದರ್ಶನೋತ್ಸುಕಃ, ಸೂರ್ಯಸ್ಯ, ಅಸ್ತಮಯಂ, ಆಚಕಾಂಕ್ಷೇ ॥೪೮॥

ಸುದುರಾಸದಾಂ-ಹೊಂದುವದಕ್ಕೆಅಸಾಧ್ಯವಾದ, ರಾವಣಸ್ಯ-ರಾವಣಾಸುರನ, ಪುರೀಂ-ಲಂಕಾಪುರಿಯನ್ನು, ರಾತ್ರೌ-ರಾತ್ರಿಯಲ್ಲಿ, ಪ್ರವಿಶ್ಯ-ಪ್ರವೇಶಮಾಡಿ, ಸರ್ವಂ-ಭವನಂ-ಯಲ್ಲಾ ಮನೆಯನ್ನೂ, ವಿಚಿನ್ವನ್-ಹುಡುಕುವವನಾಗಿ, ಜನಕಾತ್ಮಜಾಂ-ಸೀತಾದೇವಿಯನ್ನು, ದ್ರಕ್ಷ್ಯಾಮಿ-ನೋಡುವೆನು ೪೭॥

ತದಾ-ಆ ಕಾಲದಲ್ಲಿ, ವೀರಃ-ಶೂರನಾದ, ಕಪಿಃ-ವಾನರನಾದ, ಹನುಮಾನ್-ಮಾರುತಿಯು, ಇತಿ-ಈ ಪ್ರಕಾರವಾಗಿ, ಸಂಚಿಂತ್ಯ-ಆಲೋಚನೆಮಾಡಿ, ವೈದೇಹ್ಯಾಃ-ಸೀತಾದೇವಿಯ, ದರ್ಶನೋತ್ಸುಕಃ-ದರ್ಶನದಲ್ಲಿ ಕುತೂಹಲವುಳ್ಳವನಾಗಿ, ಸೂರ್ಯಸ್ಯ-ಸೂರ್ಯನ, ಅಸ್ತಮಯಂ-ಅಸ್ತಮಾನವನ್ನು, ಆಚಕಾಂಕ್ಷೇ-ಅಪೇಕ್ಷಿಸಿದನು ॥೪೮॥

ಸಾಮಾನ್ಯ ಜನರು ಹೊಂದುವದಕ್ಕೆ ಅಸಾಧ್ಯವಾದ ರಾವಣಾಸುರನ ರಾಜಧಾನಿಯಾದ ಲಂಕಾ ಪಟ್ಟಣವನ್ನು ಯಾರಿಗೂ ಗೋಚರನಾಗದಂತೆ ರಾತ್ರಿಯಲ್ಲಿ ಪ್ರವೇಶ ಮಾಡಿ ಪ್ರತಿಯೊಂದು ಮನೆಯಲ್ಲೂ ಹುಡುಕುವವನಾಗಿ ಸರ್ವ ಪ್ರಯತ್ನದಿಂದಲೂ ಸೀತಾ ದೇವಿಯನ್ನು ಕಾಣುತ್ತೇನೆ ॥೪೭॥

ಆಕಾಶದಲ್ಲಿ ಕಪಿಕುಲಾಗ್ರಣಿಯಾದ ಆ ಮಾರುತಿಯು, ಈ ಪ್ರಕಾರವಾಗಿ ಆಲೋಚನೆ ಮಾಡಿದವನಾಗಿ ಸೀತಾದೇವಿಯನ್ನು ನೋಡುವುದರಲ್ಲಿ ಕೌತುಕವನ್ನು ಹೊಂದಿ ಸೂರ್ಯನು ಅಸ್ತಂಗತನಾಗುವದನ್ನೇ ನಿರೀಕ್ಷಣೆ ಮಾಡುತ್ತಲಿದ್ದನು. ॥೪೮॥

ಮೂ ॥ ಸೂರ್ಯೇಚಾಸ್ತಂಗತೇರಾತ್ರೌ ದೇಹಂಸಂಕ್ಷಿಪ್ಯಮಾರುತಿಃ।
ಪೃಷದಂಶಕಮಾತ್ರಸ್ಸನ್ ಬಭೂವಾದ್ಭುತದರ್ಶನಃ ॥೪೯॥
ಪ್ರದೋಷಕಾಲೇಹನುಮಾಂಸ್ತೂರ್ಣ ಮುತ್ಪ್ಲುತ್ಯವೀರ್ಯವಾನ್।
ಪ್ರವಿವೇಶಪುರೀಂರಮ್ಯಾಂ ಸುವಿಭಕ್ತಮಹಾಪಥಾಂ ॥೫೦॥
ಪ್ರಾಸಾದಮಾಲಾವಿತತಾಂ ಸ್ತಂಭೈಃಕಾಂಚನರಾಜತೈಃ।
ಶಾತಕುಂಭಮಯೈರ್ಜಾಲೈರ್ಗಂಧರ್ವನಗರೋಪಮಾಂ॥ ೫೧

| ಪದಚ್ಛೇದ | ಅನ್ವಯ |
| --- | --- |
| ಸೂರ್ಯೇ, ಚ, ಅಸ್ತಂಗತೇ, ರಾತ್ರೌ, ದೇಹಂ, ಸಂಕ್ಷಿಪ್ಯ, ಮಾರುತಿಃ, ಪೃಷದಂಶಕಮಾತ್ರಃ, ಸನ್, ಬಭೂವ, ಅದ್ಭುತದರ್ಶನಃ॥೪೯॥ | ಸೂರ್ಯೇಚ, ಅಸ್ತಂಗತೇಸತಿ, ರಾತ್ರೌ ಮಾರುತಿಃ ದೇಹಂ ಸಂಕ್ಷಿಪ್ಯ, ಪೃಷದಂಶಕ ಮಾತ್ರಸ್ಸನ್, ಅದ್ಭುತ ದರ್ಶನಃ, ಬಭೂವ॥೪೯॥ |
| ಪ್ರದೋಷಕಾಲೇ, ಹನುಮಾನ್, ತೂರ್ಣಂ, ಉತ್ಪ್ಲುತ್ಯ, ವೀರ್ಯವಾನ್, ಪ್ರವಿವೇಶ, ಪುರೀಂ, ರಮ್ಯಾಂ, ಸುವಿಭಕ್ತ, ಮಹಾಪಥಾಂ॥೫೦॥ | ವೀರ್ಯವಾನ್ ಹನುಮಾನ್ ಪ್ರದೋಷಕಾಲೇ ತೂರ್ಣಂ ಉತ್ಪ್ಲುತ್ಯ, ಸುವಿಭಕ್ತ ಮಹಾಪಥಾಂ, ರಮ್ಯಾಂ-ಪುರೀಂ, ಪ್ರವಿವೇಶ॥೫೦॥ |
| ಪ್ರಾಸಾದ ಮಾಲಾ ವಿತತಾಂ, ಸ್ತಂಭೈಃ ಕಾಂಚನ ರಾಜತೈಃ, ಶಾತಕುಂಭ ಮಯೈಃ, ಜಾಲೈಃ, ಗಂಧರ್ವ ನಗರೋಪಮಾಂ॥೫೧॥ | ಸಃ, ಕಾಂಚನರಾಜತೈಃ- ಸ್ತಂಭೈಃ, ಶಾತಕುಂಭ ಮಯೈಃಜಾಲೈಃ ಉಪಲಕ್ಷಿತಾಂ, ಪ್ರಾಸಾದ ಮಾಲಾ ವಿತತಾಂ, ಗಂಧರ್ವ ನಗರೋಪಮಾಂ (ಪುರೀಂ ಪ್ರವಿವೇಶ) ॥೫೧॥ |

ಸೂರ್ಯೇಚ-ಸೂರ್ಯನಾದರೋ, ಅಸ್ತಂಗತೇಸತಿ-ಅಸ್ತಮಾನವನ್ನು ಹೊಂದಿದವನಾಗುತ್ತಿರಲಾಗಿ, ರಾತ್ರೌ-ರಾತ್ರಿಯಲ್ಲಿ, ಮಾರುತಿಃ-ಮಾರುತಿಯು, ದೇಹಂ-ಶರೀರವನ್ನು, ಸಂಕ್ಷಿಪ್ಯ-ಸಂಕೋಚಮಾಡಿಕೊಂಡು, ಪೃಷದಂಶಕಮಾತ್ರಸ್ಸನ್-ಬೆಕ್ಕಿನಷ್ಟು ಸೂಕ್ಷ್ಮಪ್ರಮಾಣವುಳ್ಳವನಾಗಿ, ಅದ್ಭುತದರ್ಶನಃ-ಆಶ್ಚರ್ಯಕರವಾದಶರೀರವುಳ್ಳವನಾಗಿ, ಬಭೂವ-ಆದನು ॥೪೯॥

ವೀರ್ಯವಾನ್-ಪರಾಕ್ರಮಶಾಲಿಯಾದ, ಹನುಮಾನ್-ಹನುಮಂತನು, ಪ್ರದೋಷಕಾಲೇ-ಸಂಧ್ಯಾಕಾಲದಲ್ಲಿ, ತೂರ್ಣಂ-ಜಾಗ್ರತೆಯಾಗಿ, ಉತ್ಪ್ಲುತ್ಯ-ಹಾರಿದವನಾಗಿ, ಸುವಿಭಕ್ತಮಹಾಪಥಾಂ-ಚೆನ್ನಾಗಿ ವಿಂಗಡಿಸಿದ ದೊಡ್ಡದೊಡ್ಡರಸ್ತೆಗಳುಳ್ಳ, ರಮ್ಯಾಂ-ರಮಣೀಯವಾದ, ಪುರೀಂ-ಲಂಕಾಪಟ್ಟಣವನ್ನು, ಪ್ರವಿವೇಶ-ಪ್ರವೇಶಮಾಡಿದನು ॥೫೦॥

ಸಃ-ಆಮಾರುತಿಯು, ಕಾಂಚನರಾಜತೈಃ-ಚಿನ್ನ ಮುತ್ತು ಬೆಳ್ಳಿಯಿಂದಮಾಡಲ್ಪಟ್ಟ, ಸ್ತಂಭೈಃ-ಕಂಭಗಳಿಂದಲೂ, ಶಾತಕುಂಭಮಯೈಃ-ಸುವರ್ಣವಿಕಾರಗಳಾದ, ಜಾಲೈಃ-ಗವಾಕ್ಷಗಳಿಂದಲೂ, ಉಪಲಕ್ಷಿತಾಂ-ಕೂಡಿಕೊಂಡಿರುವ, ಪ್ರಾಸಾದಮಾಲಾವಿತತಾಂ-ಉಪ್ಪರಿಗೆಗಳಪರಂಪರೆಯಿಂದ ವಿಸ್ತೃತವಾದ ಗಂಧರ್ವನಗರೋಪಮಾಂ-ಗಗನದಲ್ಲಿ ನಿರ್ಮಿತವಾದ ಗಂಧರ್ವನಗರಿಯಂತೆಕಾಣುತಲಿರುವ, ಪುರೀಂ-ಆ ರಾವಣನಪಟ್ಟಣವನ್ನು, ಪ್ರವಿವೇಶ-ಪ್ರವೇಶಮಾಡಿದನು ॥೫೧॥

ಈ ಮಧ್ಯದಲ್ಲಿ ಸೂರ್ಯನು ಅಸ್ತಂಗತನಾಗಲಾಗಿ, ಮಾರುತಿಯು ತನ್ನ ಶರೀರವ

ಮೂ । ಸಪ್ತಭೌಮಾಷ್ಟಭೌಮೈಶ್ಚ ಸದದರ್ಶಮಹಾಪುರೀಂ।
ತಲೈಃಸ್ಫಟಿಕಸಂಕೀರ್ಣೈಃ ಕಾರ್ತಸ್ವರವಿಭೂಷಿತೈಃ ॥೫೨॥
ವೈಡೂರ್ಯಮಣಿಚಿತ್ರೈಶ್ಚ ಮುಕ್ತಾಜಾಲವಿಭೂಷಿತೈಃ।
ತಲೈಶ್ಶುಶುಭಿರೇತಾನಿ ಭವನಾನ್ಯತ್ರ ರಕ್ಷಸಾಂ॥ ೫೩ ॥

ಪದಚ್ಛೇದ

ಸಪ್ತಭೌಮಾಷ್ಟಭೌಮೈಃ, ಚ, ಸಃ, ದದರ್ಶ, ಮಹಾಪುರೀಂ, ತಲೈಃ, ಸ್ಫಟಿಕಸಂಕೀರ್ಣೈಃ, ಕಾರ್ತಸ್ವರವಿಭೂಷಿತೈಃ ॥೫೨॥

ವೈಡೂರ್ಯಮಣಿಚಿತ್ರೈಃ, ಚ, ಮುಕ್ತಾಜಾಲವಿಭೂಷಿತೈಃ, ತಲೈಃ, ಶುಶುಭಿರೇ, ತಾನಿ, ಭವನಾನಿ, ಅತ್ರ, ರಕ್ಷಸಾಂ ॥೫೩॥

ಅನ್ವಯ

ಸ್ಫಟಿಕಸಂಕೀರ್ಣೈಃ, ಕಾರ್ತಸ್ವರವಿಭೂಷಿತೈಃ, ತಲೈಃ ಉಪಲಕ್ಷಿತೈಃ, ಸಪ್ತಭೌಮಾಷ್ಟಭೌಮೈಃ ಪ್ರಾಸಾದೈಶ್ಚ, ಉಪಲಕ್ಷಿತಾಂ, ಮಹಾಪುರೀಂ ದದರ್ಶ ॥೫೨॥

ಅತ್ರ, ರಕ್ಷಸಾಂ ತಾನಿ ಭವನಾನಿ, ವೈಡೂರ್ಯಮಣಿ ಚಿತ್ರೈಃ, ಮುಕ್ತಾಜಾಲವಿಭೂಷಿತೈಃ ತಲೈಃ, ಶುಶುಭಿರೇ ॥೫೩॥

ಸ್ಫಟಿಕಸಂಕೀರ್ಣೈಃ-ಸ್ಫಟಿಕಮಣಿಗಳಿಂದ ಕೂಡಿಕೊಂಡಿರುವ, ಕಾರ್ತಸ್ವರವಿಭೂಷಿತೈಃ-ಚಿನ್ನದಿಂದ ಅಲಂಕರಿಸಲ್ಪಟ್ಟ, ತಲೈಃ-ಸಮಭೂಮಿಗಳಿಂದ, ಉಪಲಕ್ಷಿತೈಃ-ಕೂಡಿಕೊಂಡಿರುವ-ಸಪ್ತಭೌಮಾಷ್ಟಭೌಮೈಃ-ಏಳು ಅಥವಾ ಎಂಟು ಅಂತಸ್ತುಗಳುಳ್ಳ, ಪ್ರಾಸಾದೈಶ್ಚ-ಅರಮನೆಗಳಿಂದ ಕೂಡ, ಉಪಲಕ್ಷಿತಾಂ-ಕೂಡಿಕೊಂಡಿರುವ, ಮಹಾಪುರೀಂ-ದೊಡ್ಡಪಟ್ಟಣವಾದ ಲಂಕೆಯನ್ನು, ದದರ್ಶ-ಕಂಡನು ॥೫೨॥

೫ ಅತ್ರ-ಈ ಲಂಕಾಪಟ್ಟಣದಲ್ಲಿ, ರಕ್ಷಸಾಂ-ರಾಕ್ಷಸರ, ತಾನಿ ಭವನಾನಿ-ಆ ಮನೆಗಳು, ವೈಡೂರ್ಯಮಣಿಚಿತ್ರೈಃ-ವೈಡೂರ್ಯರತ್ನಗಳಿಂದ ವಿಚಿತ್ರಗಳಾದ, ಮುಕ್ತಾಜಾಲವಿಭೂಷಿತೈಃ-ಮುತ್ತುಗಳರಾಶಿಗಳಿಂದ ಅಲಂಕರಿಸಲ್ಪಟ್ಟ, ತಲೈಃ-ಪ್ರದೇಶಗಳಿಂದ, ಶುಶುಭಿರೇ-ಹೊಳೆಯುತ್ತಿದ್ದವು ॥೫೩॥

ನ್ನು ಬೆಕ್ಕಿನ ಶರೀರದಂತೆ ಅತಿ ಸೂಕ್ಷ್ಮವನ್ನಾಗಿ ಮಾಡಿಕೊಂಡು ಅತ್ಯದ್ಭುತ ಶರೀರಾಕೃತಿಯುಳ್ಳವನಾದನು॥೪೯॥

ಶೌರ್ಯ ಸಂಪನ್ನನಾದ ಆ ಮಾರುತಿಯು ಶೀಘ್ರವಾಗಿ ಹಾರಿ ಬೇರೆ ಬೇರೆ ವಿಂಗಡಿಸಲ್ಪಟ್ಟಿರುವ ಮಾರ್ಗಗಳುಳ್ಳ, ಉಪ್ಪರಿಗೆಗಳ ಸಾಲುಗಳಿಂದ ವಿಸ್ತರಿಸಲ್ಪಟ್ಟ, ಕನಕಮಯವಾದ ಸ್ತಂಭಾಳಿಗಳಿಂದಲೂ, ಸ್ವರ್ಣಮಯವಾದ ಗವಾಕ್ಷಗಳಿಂದಲೂ ಕೂಡಿಕೊಂಡು ಗಂಧರ್ವ ನಗರದೋಪಾದಿಯಲ್ಲಿರುವ, ಏಳು ಎಂಟು ಅಂತಸ್ತುಗಳುಳ್ಳ, ಸ್ಫಟಿಕ ಮಣಿಗಳಿಂದ ವ್ಯಾಪ್ತವಾಗಿ, ಚಿನ್ನದಿಂದ ತಳಹದಿಮಾಡಿ ರತ್ನಗಳಿಂದ ಕೆತ್ತಲ್ಪಟ್ಟ ನೆಲಕಟ್ಟುಗಳಿಂದಲೂ ಯುಕ್ತವಾದ ಆ ಲಂಕಾನಗರಿಯನ್ನು ಪ್ರದೋಷಕಾಲದಲ್ಲಿ ಹಾರಿ ಪ್ರವೇಶಿಸಿದನು ॥೫೦-೫೧-೫೨॥

ರಾಕ್ಷಸ ರಾಜಧಾನಿಯಾದ ಈ ಲಂಕಾನಗರಿಯಲ್ಲಿ ನಿರ್ಮಿತಗಳಾದ ಭವನಗಳು, ತಲಪ್ರದೇಶದಲ್ಲಿ ಅತಿ ವಿಚಿತ್ರ, ವೈಡೂರ್ಯ ರತ್ನಗಳಿಂದ ಖಚಿತಗಳಾಗಿಯೂ, ಅತ್ಯಾಶ್ಚರ್ಯಗಳಾದ ಮುತ್ತುಗಳಗೊಂಚಲುಗಳಿಂದ ಅಲಂಕರಿಸಲ್ಪಟ್ಟವುಗಳಾಗಿಯೂ, ಪ್ರಕಾಶಿಸುತ್ತಲಿದ್ದವು ॥೫೩॥

ಮೂ ॥ ಕಾಂಚನಾನಿವಿಚಿತ್ರಾಣಿತೋರಣಾನಿಚರಕ್ಷಸಾಂ ।
ಲಂಕಾಮುದ್ಯೋತಯಾಮಾಸು ಸ್ಸರ್ವತಸ್ಸಮಲಂಕೃತಾಂ॥ ೫೪ ॥
ಅಚಿಂತ್ಯಾಮದ್ಭುತಾಕಾರಾಂದೃಷ್ಟ್ವಾಲಂಕಾಂಮಹಾಕಪಿಃ।
ಆಸೀದ್ವಿಷಣ್ಣೋಹೃಷ್ಟಶ್ಚ ವೈದೇಹ್ಯಾದರ್ಶನೋತ್ಸುಕಃ ೫೫ ॥
ಸಪಾಂಡುರೋದ್ವಿದ್ಧ ವಿಮಾನಮಾಲಿನೀಂಮಹಾರ್ಹ ಜಾಂಬೂನದ
ಜಾಲತೋರಣಾಂ। ಯಶಸ್ವಿನೀಂರಾವಣಬಾಹುಪಾಲಿತಾಂಕ್ಷಪಾಚರೈ
ರ್ಭೀಮಬಲೈಸ್ಸಮಾವೃತಾಂ ॥೫೬ ॥

ಪದಚ್ಛೇದ

ಕಾಂಚನಾನಿ, ವಿಚಿತ್ರಾಣಿ, ತೋರಣಾನಿ, ಚ, ರಕ್ಷಸಾಂ, ಲಂಕಾಂ, ಉದ್ಯೋತಯಾಮಾಸುಃ, ಸರ್ವತಃ, ಸಮಲಂಕೃತಾಂ ॥೫೪॥

ಅಚಿಂತ್ಯಾಂ, ಅದ್ಭುತಾಕಾರಾಂ, ದೃಷ್ಟ್ವಾ, ಲಂಕಾಂ, ಮಹಾಕಪಿಃ, ಆಸೀತ್, ವಿಷಣ್ಣಃ, ಹೃಷ್ಟಃ, ಚ, ವೈದೇಹ್ಯಾಃ, ದರ್ಶನೋತ್ಸುಕಃ, ಸಃ, ಪಾಂಡುರೋದ್ವಿದ್ಧ ವಿಮಾನಮಾಲಿನೀಂ, ಮಹಾರ್ಹಜಾಂಬೂನದ ಜಾಲತೋರಣಾಂ, ಯಶಸ್ವಿನೀಂ, ರಾವಣಬಾಹುಪಾಲಿತಾಂ, ಕ್ಷಪಾಚರೈಃ, ಭೀಮಬಲೈಃ ಸಮಾವೃತಾಂ ॥೫೫-೫೬॥

ಅನ್ವಯ

ಕಾಂಚನಾನಿ, ವಿಚಿತ್ರಾಣಿ, ರಕ್ಷಸಾಂ, ತೋರಣಾನಿ, ಸರ್ವತಃ ಸಮಲಂಕೃತಾಂ ಲಂಕಾಂ ಉದ್ಯೋತಯಾಮಾಸುಃ ॥೫೪॥

ಸಃ, ಮಹಾಕಪಿಃ, ಅಚಿಂತ್ಯಾಂ, ಅದ್ಭುತಾಕಾರಾಂ, ಪಾಂಡುರೋದ್ವಿದ್ಧ ವಿಮಾನಮಾಲಿನೀಂ, ಮಹಾರ್ಹಜಾಂಬೂನದಜಾಲತೋರಣಾಂ, ಯಶಸ್ವಿನೀಂ, ರಾವಣಬಾಹುಪಾಲಿತಾಂ, ಭೀಮಬಲೈಃ, ಕ್ಷಪಾಚರೈಃ ಸಮಾವೃತಾಂ, ಲಂಕಾಂ, ದೃಷ್ಟ್ವಾ, ವಿಷಣ್ಣಃ, ವೈದೇಹ್ಯಾಃ ದರ್ಶನೋತ್ಸುಕಃ ಹೃಷ್ಟಃ ಚ, ಆಸೀತ್ ॥೫೫-೫೬॥

ಕಾಂಚನಾನಿ-ಸುವರ್ಣಮಯಗಳಾದ, ವಿಚಿತ್ರಾಣಿ-ನಾನಾವರ್ಣಗಳುಳ್ಳ, ರಕ್ಷಸಾಂ-ರಾಕ್ಷಸರ (ಮನೆಗಳಸಂಬಂಧಗಳಾದ,) ತೋರಣಾನಿ- ಮಕರತೋರಣಗಳು, ಸರ್ವತಃ-ಎಲ್ಲಾಕಡೆಯಲ್ಲೂ, ಸಮಲಂಕೃತಾಂ-ಅಲಂಕರಿಸಲ್ಪಟ್ಟ, ಲಂಕಾಂ-ಲಂಕಾಪಟ್ಟಣವನ್ನು, ಉದ್ಯೋತಯಾಮಾಸುಃ-ಪ್ರಕಾಶಗೊಳ್ಳುವಂತೆಮಾಡಿದವು ॥೫೪॥

ಸಃ ಮಹಾಕಪಿಃ-ವಾನರೋತ್ತಮನಾದ ಆ ಮಾರುತಿಯು, ಅಚಿಂತ್ಯಾಂ-ಯೋಚಿಸುವುದಕ್ಕೂ ಅಸಾಧ್ಯವಾದ, ಅದ್ಭುತಾಕಾರಾಂ-ಅತ್ಯದ್ಭುತಗಳಾದ ಆಕೃತಿಗಳುಳ್ಳ, ಪಾಂಡುರೋದ್ವಿದ್ಧವಿಮಾನಮಾಲಿನೀಂ-ಶುಭ್ರಗಳಾಗಿಯೂ ಎತ್ತರಗಳಾಗಿಯೂ ಇರುವ ಉಪ್ಪರಿಗೆಗಳಸಾಲುಗಳುಳ್ಳ, ಮಹಾರ್ಹಜಾಂಬೂನದಜಾಲತೋರಣಾಂ-ಅತಿಶ್ರೇಷ್ಠಗಳಾದ ಸುವರ್ಣದ ಕಿಟಕಿಗಳೂ, ಗವಾಕ್ಷಗಳೂ ಮತ್ತು ತಲೆಬಾಗಿಲುಗಳೂ ಉಳ್ಳ, ಯಶಸ್ವಿನೀಂ-ಕೀರ್ತಿಗಂಪನ್ನವಾದ, ರಾವಣಬಾಹುಪಾಲಿತಾಂ-ರಾವಣಭುಜಪರಾಕ್ರಮದಿಂದ ರಕ್ಷಿಸಲ್ಪಟ್ಟ, ಭೀಮಬಲೈಃ-ಭಯಂಕರಶಕ್ತಿಯುಳ್ಳ, ಕ್ಷಪಾಚರೈಃ-ರಾತ್ರಿಂಚರರಾದ ರಾಕ್ಷಸರಿಂದ, ಸಮಾವೃತಾಂ-ಸುತ್ತುವರೆಯಲ್ಪಟ್ಟ, ಲಂಕಾಂ-ಲಂಕಾಪಟ್ಟಣವನ್ನು, ದೃಷ್ಟ್ವಾ-ನೋಡಿ, ವಿಷಣ್ಣಃ

ಮೂ ॥ ಚಂದ್ರೋಽಪಿಸಾಚಿವ್ಯಮಿವಾಸ್ಯ ಕುರ್ವಂಸ್ತಾರಾಗಣೈರ್ಮಧ್ಯಗತೋ ವಿರಾಜನ್। ಜ್ಯೋತ್ಸ್ನಾವಿತಾನೇನವಿತತ್ಯಲೋಕಮುತ್ತಿಷ್ಠತೇ ನೈಕಸಹಸ್ರರಶ್ಮಿಃ ॥೫೭ ॥

**ಪದಚ್ಛೇದ**

ಚಂದ್ರಃ, ಅಪಿ, ಸಾಚಿವ್ಯಂ ಇವ, ಅಸ್ಯ, ಕುರ್ವನ್, ತಾರಾಗಣೈಃ, ಮಧ್ಯಗತಃ, ವಿರಾಜನ್, ಜ್ಯೋತ್ಸ್ನಾವಿತಾನೇನ, ವಿತತ್ಯ, ಲೋಕಂ, ಉತ್ತಿಷ್ಠತೇ, ನೈಕಸಹಸ್ರರಶ್ಮಿಃ ॥೫೭॥

**ಅನ್ವಯ**

ಜ್ಯೋತ್ಸ್ನಾವಿತಾನೇನ ಲೋಕಂವಿತತ್ಯ ವಿರಾಜನ್, ನೈಕಸಹಸ್ರರಶ್ಮಿಃ ತಾರಾಗಣೈಃ ಮಧ್ಯಗತಃ ಚಂದ್ರೋಽಪಿ ಅಸ್ಯ ಸಾಚಿವ್ಯಂ ಕುರ್ವನ್ನಿವ ಉತ್ತಿಷ್ಠತೇ ॥೫೭॥

-ವಿಷಾದವುಳ್ಳವನಾಗಿ, ವೈದೇಹ್ಯಾಃ-ಜಾನಕಿಯ, ದರ್ಶನೋತ್ಸುಕಸ್ಸನ್-ದರ್ಶನದಲ್ಲಿಕುತೂಹಲವುಳ್ಳವನಾದ್ದರಿಂದಲೇ, ಹೃಷ್ಟಶ್ಚ-ಸಂತೋಷವುಳ್ಳವನೂಕೂಡ, ಆಸೀತ್-ಆದನು ॥೫೫-೫೬॥

ಜ್ಯೋತ್ಸ್ನಾವಿತಾನೇನ-ಬೆಳದಿಂಗಳಸಮೂಹದಿಂದ, ಲೋಕಂ-ಪ್ರಪಂಚವನ್ನು, ವಿತತ್ಯ-ವ್ಯಾಪಿಸಿ, ವಿರಾಜನ್-ಪ್ರಕಾಶಿಸುತಲಿರುವ, ನೈಕಸಹಸ್ರರಶ್ಮಿಃ-ಅನೇಕಸಹಸ್ರಕಿರಣಗಳುಳ್ಳ, ತಾರಾಗಣೈಃ-ನಕ್ಷತ್ರಗಳಗುಂಪಿನಿಂದಯುಕ್ತನಾದ, ಮಧ್ಯಗತಃ-ಆ ನಕ್ಷತ್ರಗಳಮಧ್ಯದಲ್ಲಿರತಕ್ಕವನಾಗಿ, ಅಸ್ಯ-ಈ ಆಂಜನೇಯನಿಗೆ, ಸಾಚಿವ್ಯಂ-ಸಹಾಯವನ್ನು, ಕುರ್ವನ್ನಿವ-ಮಾಡುತಲಿದ್ದಾನೆಯೋ ಎಂಬಂತೆ, ಉತ್ತಿಷ್ಠತೇ-ಸ್ಮ ಉದಯಿಸಿದನು ॥೫೭॥

ಸುವರ್ಣ ಮಾಲಿಕಾಲಂಕೃತವಾದ ವಿಚಿತ್ರ ಮಣಿಖಚಿತವಾದ ಮಕರ ತೋರಣಗಳು ಲಂಕಾನಗರಿಯನ್ನು ಅತ್ಯುಜ್ವಲವನ್ನಾಗಿ ಮಾಡಿದವು॥೫೪॥

ಈ ಪ್ರಕಾರವಾಗಿ ಆಶ್ಚರ್ಯಕರವಾಗಿಯೂ, ಮನಸ್ಸಿಂದಲೂ ಯೋಚಿಸಲಸಾಧ್ಯವಾದ ಸೌಂದರ್ಯಾತಿಶಯಮುಳ್ಳದ್ದಾಗಿಯೂ ಇರುವ, ಮತ್ತು ಧವಳೋನ್ನತಪ್ರಾಸಾದ ಪಙ್ಕ್ತಿಯುತವಾದ, ಶ್ರೇಷ್ಠಗಳಾದ ಮಕರತೋರಣಗಳಿಂದ ಅಲಂಕೃತವಾದ, ಸಕಲ ಲೋಕ ಪ್ರಸಿದ್ಧವಾದ, ಅನೇಕಶೂರರಾದ ರಾಕ್ಷಸ ಪರಿವೃತವಾದ, ರಾಕ್ಷಸಾಧಿಪತಿಯಾದ ರಾವಣಬಾಹುಗುಪ್ತವಾದರಿಂದಲೇ ಬ್ರಹ್ಮಾದಿಗಳಿಗೂ ಪ್ರವೇಶಿಸಲಸಾಧ್ಯವಾದ ಆ ಲಂಕಾಪಟ್ಟಣವನ್ನು ಕಂಡು ಆಮಾರುತಿಯು ಖೇದಯುಕ್ತನಾದಾಗ್ಯೂ, ಸೀತಾದೇವಿಯನ್ನು ನೋಡಬೇಕೆಂಬ ಕುತೂಹಲಯುಕ್ತನಾದ ಕಾರಣ ಉತ್ಸಾಹಶಾಲಿಯಾಗಿಯೂ ಕೂಡ ಇರುವವನಾಗಿದ್ದನು॥೫೫-೫೬॥

ಮಾರುತಿಯು ಲಂಕಾಮಧ್ಯದಲ್ಲಿ ಸೀತಾನ್ವೇಷಣಕ್ಕೆ ಪ್ರಾರಂಭ ಮಾಡುತ್ತಿರಲಾಗಿ ತತ್ಕಾಲದಲ್ಲಿ ಶ್ರೀ ರಾಮನಕಾರ್ಯಕ್ಕಾಗಿ ಲಂಕೆಯನ್ನು ಸುತ್ತುತ್ತಲಿರುವ ಮಾರುತಿಗೆ ಸಹಾಯ ಮಾಡುವದಕ್ಕಾಗಿಯೋ ಎಂಬಂತೆ ನಕ್ಷತ್ರಮಂಡಲ ಪರಿವೃತನಾದ ಚಂದ್ರಿಕಾ ಸಂತತಿಯಿಂದ ಲೋಕವನ್ನೆಲ್ಲಾ ಬೆಳಗುತಲಿರುವ ಚಂದ್ರನು ಉದಯಿಸಿದನು॥೫೭॥

ಮೂ ॥ ಶಂಖಪ್ರಭಂಕ್ಷೀರಮೃಣಾಳ ವರ್ಣಮುದ್ಗಚ್ಛಮಾನಂವ್ಯವಭಾಸಮಾ
ನಂ। ದದರ್ಶಚಂದ್ರಂಸಹರಿಪ್ರವೀರಃಪೋಪ್ಲೂಯಮಾನಂಸರಸೀವ
ಹಂಸಂ॥ ೫೮ ॥

ಇತ್ಯಾರ್ಷೆ ಶ್ರೀಮದ್ರಾಮಾಯಣೇ ವಾಲ್ಮೀಕಿಯೇ
ಸುಂದರಕಾಂಡೇ ದ್ವಿತೀಯಸ್ಸರ್ಗಃ

| ಪದಚ್ಛೇದ | ಅನ್ವಯ |
|---|---|
| ಶಂಖಪ್ರಭಂ, ಕ್ಷೀರಮೃಣಾಳವರ್ಣಂ, ಉದ್ಗಚ್ಛಮಾನಂ, ವ್ಯವಭಾಸಮಾನಂ, ಸರಸಿ, ಇವ, ಹಂಸಂ ॥೫೮॥ | ಸಃ ಹರಿಪ್ರವೀರಃ ಶಂಖಪ್ರಭಂ, ಕ್ಷೀರಮೃಣಾಳವರ್ಣಂ, ವ್ಯವಭಾಸಮಾನಂ ಚಂದ್ರಂ, ಸರಸಿ, ಪೋಪ್ಲೂಯಮಾನಂ ಹಂಸಮಿವ, ದದರ್ಶ ॥೫೮॥ |

ಸಃ ಹರಿಪ್ರವೀರಃ-ಆ ವಾನರಶ್ರೇಷ್ಠನು, ಶಂಖಪ್ರಭಂ-ಶಂಖದಕಾಂತಿಯೋಪಾದಿಯಲ್ಲಿರುವ ಕಾಂತಿಯುಳ್ಳ, ಕ್ಷೀರಮೃಣಾಳವರ್ಣಂ-ಹಾಲು ಮತ್ತು ತಾವರೆದಂಟು ಇವುಗಳಂತೆ ಶುಭ್ರವರ್ಣವುಳ್ಳ, ವ್ಯವಭಾಸಮಾನಂ-ಸರ್ವತೋಮುಖವಾಗಿ ಪ್ರಕಾಶಿಸುತಲಿರುವ, ಚಂದ್ರಂ-ಚಂದ್ರನನ್ನು, ಸರಸಿ-ಸರಸ್ಸಿನಲ್ಲಿ, ಪೋಪ್ಲೂಯಮಾನಂ- ಈಜಾಡುತಲಿರುವ, ಹಂಸಮಿವ-ಹಂಸವನ್ನೋಪಾದಿಯಲ್ಲಿ, ದದರ್ಶ- ನೋಡಿದನು ॥೫೮॥

ವಾನರೋತ್ತಮನಾದ ಆ ಮಾರುತಿಯು ಹಾಲು ತಾವರೆ ದಂಟು ಇವುಗಳಿಗೆ ಸಮಾನವಾದ ಕಾಂತಿಯುಳ್ಳ ಗಗನ ಸರಸ್ಸಿನಲ್ಲಿ ಈಜಾಡುತ್ತಿರುವ ಹಂಸ ಪಕ್ಷಿಯಂತೆ ಕಂಗೊಳಿಸುತ್ತಲಿದ್ದ ಸರ್ವತೋ ಮುಖವಾಗಿ ತನ್ನ ಕಿರಣಗಳನ್ನು ಎರಚುತಲಿದ್ದವನಂತೆ ಕಾಣುತ್ತಲಿದ್ದ ಚಂದ್ರನನ್ನು ಸಂದರ್ಶಿಸುವನಾದನು॥೫೮॥

ಇತಿ ಶ್ರೀಮದ್ವಾಲ್ಮೀಕಿ ಪ್ರೋಕ್ತವಾದ ಶ್ರೀಮದ್ರಾಮಾಯಣದ ಸುಂದರಕಾಂಡಾರ್ಥ
ಬೋಧಿನಿಯಲ್ಲಿ ಎರಡನೆಯ ಸರ್ಗವು
ಪರಿಸಮಾಪ್ತವಾದುದು



ಶ್ರೀಮತ್ಸುಂದರ ಕಾಂಡೇ ತೃತೀಯಸ್ಸರ್ಗಃ

ಮೂ ॥ ಸಲಂಬಶಿ ಖರೇಲಂಬೇ ಲಬಂತೋಯದಸನ್ನಿಭೇ।
ಸತ್ವಮಾಸ್ಥಾಯಮೇಧಾವೀ ಹನುಮನ್ಮಾರುತಾತ್ಮಜಃ॥ ೧ ॥
ನಿಶಿಲಂಕಾಂಮಹಾಸತ್ವೋವಿವೇಶ ಕಪಿಕುಂಜರಃ।
ರಮ್ಯಕಾನನತೋಯಾಢ್ಯಾಂ ಪುರೀಂರಾವಣಪಾಲಿತಾಂ॥ ೨ ॥
ಶಾರದಾಂಬುಧರಪ್ರಖ್ಯೈರ್ಭವನೈರುಪಶೋಭಿತಾಂ।
ಸಾಗರೋಪಮನಿರ್ಘೋಷಾಂ ಸಾಗರಾನಿಲಸೇವಿತಾಂ ॥ ೩ ॥
ಸುಪುಷ್ಪಜಲಸಂಪುಷ್ಟಾಂ ಯಥೈವವಿಟಪಾವತೀಮ್।
ಚಾರುತೋರಣನಿರ್ಯೂಹಾಂ ಪಾಂಡುರದ್ವಾರತೋರಣಾಂ॥ ೪ ॥

ಪದಚ್ಛೇದ

ಸಃ, ಲಂಬಶಿಖರೇ, ಲಂಬೇ, ಲಂಬತೋಯದಸನ್ನಿಭೇ, ಸತ್ವಂ, ಆಸ್ಥಾಯ, ಮೇಧಾವೀ, ಹನುಮಾನ್, ಮಾರುತಾತ್ಮಜಃ, ನಿಶಿ, ಲಂಕಾಂ, ಮಹಾಸತ್ವಂ, ವಿವೇಶ, ಕಪಿಕುಂಜರಃ, ರಮ್ಯಕಾನನತೋಯಾಢ್ಯಾಂ, ಪುರೀಂ, ರಾವಣಪಾಲಿತಾಂ, ಶಾರದಾಂಬುಧರಪ್ರಖ್ಯೈಃ, ಭವನೈಃ, ಉಪಶೋಭಿತಾಂ, ಸಾಗರೋಪಮನಿರ್ಘೋಷಾಂ, ಸಾಗರಾನಿಲಸೇವಿತಾಂ, ಸುಪುಷ್ಪಜಲಸಂಪುಷ್ಟಾಂ, ಯಥಾ, ಏವ, ವಿಟಪಾವತೀಂ ಚಾರುತೋರಣನಿರ್ಯೂಹಾಂ,

ಅನ್ವಯ

ಮೇಧಾವೀ, ಮಹಾಸತ್ವಃ, ಕಪಿಕುಂಜರಃ, ಮಾರುತಾತ್ಮಜಃ, ಸಃ ಹನುಮಾನ್, ಲಂಬತೋಯದಸಂನ್ನಿಭೇ, ಲಂಬೇ, ಲಂಬಶಿಖರೇ, ಸತ್ವಂ, ಆಸ್ಥಾಯ, ಲಂಕಾಂ, ವಿವೇಶಃ; ರಮ್ಯಕಾನನತೋಯಾಢ್ಯಾಂ, ಶಾರದಾಂಬುಧರಪ್ರಖ್ಯೈಃ, ಭವನೈಃ ಉಪಶೋಭಿತಾಂ, ಸಾಗರೋಪಮನಿರ್ಘೋಷಾಂ, ಸಾಗರಾನಿಲಸೇವಿತಾಂ, ಸುಪುಷ್ಪಜಲಸಂಪುಷ್ಟಾಂ, ವಿಟಪಾವತೀಂ ಯಥಾ, ಚಾರುತೋರಣನಿರ್ಯೂ

ಮೇಧಾವೀ-ಬುದ್ಧಿವಂತನಾದ, ಮಹಾ ಸತ್ವಃ-ಬಹಳಬಲಶಾಲಿಯಾದ, ಕಪಿಕುಂಜರಃ-ಕಪಿಶ್ರೇಷ್ಠನಾದ, ಮಾರುತಾತ್ಮಜಃ-ವಾಯುಪುತ್ರನಾದ, ಸಃ ಹನುಮಾನ್-ಆ ಮಾರುತಿಯು, ಲಂಭತೋ ಯದ ಸನ್ನಿಭೇ-ಜೋಲಾಡುತ್ತಿರುವ ಮೇಘಕ್ಕೆ ಸಮಾನವಾದ, ಲಂಬೇ-ನೇತಾಡುವಂತಿರುವ, ಲಂಬ ಶಿಖರೇ-ತ್ರಿಕೂಟಪರ್ವತದ ಶಿಖರದಲ್ಲಿ, ಸತ್ವಂ-ಬಲವಾಗಿ, ಆಸ್ಥಾಯ-ನಿಂತು, ನಿಶಿ-ರಾತ್ರಿಯಲ್ಲಿ, ಲಂಕಾಂ-ಲಂಕಾ ಪಟ್ಟಣವನ್ನು, ವಿವೇಶ-ಪ್ರವೇಶಮಾಡಿದನು, ರಮ್ಯಕಾನನತೋಯಾಢ್ಯಾಂ-ಮನೋಹರವಾದ ಅರಣ್ಯದಲ್ಲಿರುವ ಉದಕಗಳಿಂದ ಪರಿಪೂರ್ಣವಾದ, ಶಾರದಾಂಬುಧರಪ್ರಖ್ಯೈಃ-ಶರತ್ಕಾಲದ ಮೇಘಗಳ ಕಾಂತಿಯೋಪಾದಿಯಲ್ಲಿ ಕಾಂತಿಯುಳ್ಳ, ಭವನೈಃ-ಮನೆಗಳಿಂದ, ಉಪಶೋಭಿತಾಂ-ಪ್ರಕಾಶಿತವಾದ, ಸಾಗರೋಪಮ ನಿರ್ಘೋಷಾಂ-ಸಮುದ್ರಕ್ಕೆ ಸದೃಶವಾದ ಧ್ವನಿಯುಳ್ಳ, ಸಾಗರಾನಿಲಸೇವಿತಾಂ-ಸಮುದ್ರದ ಗಾಳಿಯಿಂದ ಸೇವಿಸಲ್ಪಟ್ಟ, ಸುಪುಷ್ಪಜಲ ಸಂಪುಷ್ಟಾಂ-ಚನ್ನಾಗಿ ಪರಿಪೋಷಿತವಾದ ಜಲದಿಂದ ಪೋಷಿತವಾದ ಜಲದಿಂದ ಪೂರ್ಣವಾದ, ವಿಟಪಾವತೀಂ ಯಥಾ-ಅಲಕಾಪಟ್ಟಣವೋ ಎಂಬಂತೆ ಕಾಣುತ್ತಿರುವ ಚಾರು ತೋರಣ ನಿರ್ಯೂಹಾಂ-ಮನೋಹರವಾದ ಊರು ಬಾಗಿಲು ದೋಣಿಗೆ(ಕಮಾನಿಗೆ)ಆಧಾರವಾದ ಆನೆಗಳ ಆಕಾರವುಳ್ಳ, ಪಾಂಡುರದ್ವಾರತೋರಣಾಂ-ಅತಿಶುಭ್ರಗಳಾದ ಬಾಗಿಲುಗಳೂ ತೋರಣ ಪಟ್ಟಿಗಳೂವುಳ್ಳ, ಭುಜಗಾಚರಿತಾಂ-ಸರ್ಪಗಳಿಂದ ಸಂಚರಿಸಲ್ಪಟ್ಟ, ಗುಪ್ತಾಂ-ಚನ್ನಾಗಿ ರಕ್ಷಿಸಲ್ಪಟ್ಟ,

ಭುಜಗಾಚರಿತಾಂಗುಪ್ತಾಂ ಶುಭಾಂಭೋಗವತೀಮಿವ।
ತಾಂಸವಿದ್ಯುದ್ಘನಾಕೀರ್ಣಾಂ ಜ್ಯೋತಿರ್ಮಾರ್ಗನಿಷೇವಿತಾಂ॥ ೫ ॥
ಮಂದಮಾರುತಸಂಚಾರಾಂ ಯಥೇಂದ್ರಸ್ಯಾಮರಾವತೀಮ್।
ಶಾತಕುಂಭೇನಮಹತಾಪ್ರಾಕಾರೇಣಾಭಿಸಂವೃತಾಂ॥ ೬ ॥
ಕಿಂಕಿಣೀಜಾಲಘೋಷಾಭಿಃ ಪತಾಕಾಭಿರಲಂಕೃತಾಂ।
ಆಸಾದ್ಯಸಹಸಾಹೃಷ್ಟಃ ಪ್ರಾಕಾರಮಭಿಪೇದಿವಾನ್॥ ೭ ॥

ಪಾಂಡುರದ್ವಾರತೋರಣಾಂ, ಭುಜಗಾಚರಿತಾಂ ಗುಪ್ತಾಂ, ಶುಭಾಂ, ಭೋಗವತೀಂ, ಇವ, ತಾಂ, ಸವಿದ್ಯುದ್ಘನಾಕೀರ್ಣಾಂ, ಜ್ಯೋತಿರ್ಮಾರ್ಗನಿಷೇವಿತಾಂ, ಮಂದಮಾರುತಸಂಚಾರಾಂ, ಯಥಾ, ಇಂದ್ರಸ್ಯ, ಅಮರಾವತೀಂ, ಶಾತಕುಂಭೇನ, ಮಹತಾ, ಪ್ರಾಕಾರೇಣ, ಅಭಿಸಂವೃತಾಂ, ಕಿಂಕಿಣೀಜಾಲಘೋಷಾಭಿಃ, ಪತಾಕಾಭಿಃ, ಅಲಂಕೃತಾಂ, ಆಸಾದ್ಯ, ಸಹಸಾ, ಹೃಷ್ಟಃ, ಪ್ರಾಕಾರಂ, ಅಭಿಪೇದಿವಾನ್ ॥೧-೭॥

ಪಾಂಡುರದ್ವಾರತೋರಣಾಂ, ಭುಜಗಾಚರಿತಾಂ, ಗುಪ್ತಾಂ, ಭೋಗವತೀಮಿವಸ್ಥಿತಾಂ, ಶುಭಾಂ, ಸವಿದ್ಯುದ್ಘನಾಕೀರ್ಣಾಂ, ಜ್ಯೋತಿರ್ಮಾರ್ಗನಿಷೇವಿತಾಂ, ಮಂದಮಾರುತಸಂಚಾರಾಂ, ಇಂದ್ರಸ್ಯ ಅಮರಾವತೀಂಯಥಾ, ಶಾತಕುಂಭೇನ ಮಹತಾ ಪ್ರಾಕಾರೇಣ ಅಭಿಸಂವೃತಾಂ, ಕಿಂಕಿಣೀಜಾಲಘೋಷಾಭಿಃ ಪತಾಕಾಭಿಃ ಅಲಂಕೃತಾಂ, ರಾವಣಪಾಲಿತಾಂ, ಲಂಕಾಂ, ಸಹಸಾ ಆಸಾದ್ಯ, ಪ್ರಾಕಾರಂ ಅಭಿಪೇದಿವಾನ್ ॥೧-೭॥

ಭೋಗವತೀಮಿವ-ನಾಗಲೋಕದರಾಜಧಾನಿಯಂತೆ ಎಸೆಯುತ್ತಿರುವ, ಶುಭಾಂ-ಮಂಗಳಕರವಾದ, ಸವಿದ್ಯುದ್ಘನಾಕೀರ್ಣಾಂ-ಮಿಂಚುಗಳಿಂದೊಡಗೂಡಿದಮೇಘಗಳಿಂದವ್ಯಾಪ್ತವಾದ, ಜ್ಯೋತಿರ್ಮಾರ್ಗನಿಷೇವಿತಾಂ-ನಕ್ಷತ್ರಮಾರ್ಗದಲ್ಲಿಸೇವಿಸಲ್ಪಟ್ಟ, ಮಂದಮಾರುತಸಂಚಾರಾಂ- ತಂಗಾಳಿಯ ಸಂಚಾರದಿಂದ ಸುಶೀತಲವಾದ, ಇಂದ್ರಸ್ಯ-ದೇವೇಂದ್ರನ, ಅಮರಾವತೀಂ ಯಥಾ-ಅಮರಾವತೀಪಟ್ಟಣದೋಪಾದಿಯಲ್ಲಿರುವ; ಶಾತಕುಂಭೇನ-ಸುವರ್ಣಮಯವಾದ, ಮಹತಾ-ದೊಡ್ಡದಾದ, ಪ್ರಾಕಾರೇಣ-ಕೋಟೆಯಗೋಡೆಯಿಂದ, ಅಭಿಸಂವೃತಾಂ-ಸುತ್ತಿಕೊಳ್ಳಲ್ಪಟ್ಟ, ಕಿಂಕಿಣೀಜಾಲಘೋಷಾಭಿಃ-ಕಿರುಗೆಜ್ಜೆಗಳಸಮುದಾಯಧ್ವನಿಗಳುಳ್ಳ, ಪತಾಕಾಭಿಃ-ಧ್ವಜಪಟಗಳಿಂದ, ಅಲಂಕೃತಾಂ-ಅಲಂಕರಿಸಲ್ಪಟ್ಟ! ರಾವಣಪಾಲಿತಾಂ-ರಾವಣನಿಂದರಕ್ಷಿತವಾದ, ಲಂಕಾಂ-ಲಂಕಾಪಟ್ಟಣವನ್ನು ಸಹಸಾ-ಜಾಗ್ರತೆಯಾಗಿ, ಆಸಾದ್ಯ-ಹೊಂದಿ, ಪ್ರಾಕಾರಂ-ಕೋಟೆಯಗೋಡೆಯನ್ನು, ಅಭಿಪೇದಿವಾನ್-ಹೊಂದಿದನು ॥೧-೭॥

ವಾನರೋತ್ತಮನಾದ ಆ ಮಾರುತಿಯು ಗಗನಮಂಡಲದಲ್ಲಿ ಜೋಲಾಡುತ್ತಲಿರುವ ಮೇಘದಂತೆ ಆ ಲಂಬಾಚಲದ ಶಿಖರದಲ್ಲಿದ್ದು, ಸ್ವಕೀಯವಾದ ಪೂರ್ಣಬಲದಿಂದ ಯುಕ್ತನಾಗಿ ರಾತ್ರಿಯಕಾದಲ್ಲಿ ಆ ಲಂಕಾನಗರಿಯನ್ನು ಪ್ರವೇಶಿಸಿ ಸುಂದರಗಳಾದ ಉದ್ಯಾನವನಗಳಿಂದಲೂ, ಸರೋವರಗಳಿಂದಲೂ ಪರಿಪೂರ್ಣವಾಗಿಯೂ, ದಶಮುಖನಿಂದ ಪಾಲಿತವಾಗಿಯೂ, ಶರತ್ಕಾಲಿಕ ಮೇಘ ಸದೃಶಗಳಾದ ಅತ್ಯುನ್ನತ ರಾಜಭವನಗಳಿಂದ ಸುಶೋ-

ಮೂ || ವಿಸ್ಮಯಾವಿಷ್ಟಹೃದಯಃ ಪುರೀಮಾಲೋಕ್ಯ ಸರ್ವತಃ|
ಜಾಂಬೂನದಮಯೈರ್ದ್ವಾ-ರೈರ್ವೈಡೂರ್ಯಕೃತವೇದಿಕೈಃ||
ವಜ್ರಸ್ಫಟಿಕಮುಕ್ತಾಭಿರ್ಮಣಿ ಕುಟ್ಟಿಮಭೂಷಿತೈಃ|
ತಪ್ತಹಾಟಕನಿರ್ಯೂಹೈ ರಾಜತಾಮಲಪಾಂಡುರೈಃ||

ಪದಚ್ಛೇದ

ವಿಸ್ಮಯಾವಿಷ್ಟಹೃದಯಃ, ಪುರೀಂ, ಆಲೋಕ್ಯ, ಸರ್ವತಃ, ಜಾಂಬೂನದಮಯೈಃ, ದ್ವಾರೈಃ, ವೈಡೂರ್ಯಕೃತವೇದಿಕೈಃ, ವಜ್ರಸ್ಫಟಿಕಮುಕ್ತಾಭಿಃ, ಮಣಿಕುಟ್ಟಿಮಭೂಷಿತೈಃ, ತಪ್ತಹಾಟ

ಅನ್ವಯ

ಜಾಂಬೂನದಮಯೈಃ, ವೈಡೂರ್ಯಕೃತವೇದಿಕೈಃ, ವಜ್ರಸ್ಫಟಿಕಮುಕ್ತಾಭಿಃ,ಮಣಿಕುಟ್ಟಿಮಭೂಷಿತೈಃ, ತಪ್ತಹಾಟಕನಿರ್ಯೂಹೈಃ, ರಾಜತಾಮಲಪಾಂಡುರೈಃ, ವೈಡೂರ್ಯಕೃತಸೋಪಾನೈಃ

ಜಾಂಬೂನದಮಯೈಃ-ಸುವರ್ಣವಿಕಾರಗಳಾದ, ವೈಡೂರ್ಯಕೃತವೇದಿಕೈಃ-ವೈಡೂರ್ಯವೆಂಬ ರತ್ನಗಳಿಂದಮಾಡಲ್ಪಟ್ಟ ಜಗುಲಿಗಳುಳ್ಳ, ವಜ್ರಸ್ಫಟಿಕಮುಕ್ತಾಭಿಃ-ವಜ್ರಸ್ಫಟಿಕಮಣಿ ಮತ್ತು ಮುತ್ತುಗಳು ಇವುಗಳಿಂದ ಯುಕ್ತವಾದ, ಮಣಿಕುಟ್ಟಿಮಭೂಷಿತೈಃ-ರತ್ನಗಳಿಂದ ನಿಬ್ಬದ್ಧಗಳಾದ ಭೂಮಿಗಳಿಂದ ಅಲಂಕರಿಸಲ್ಪಟ್ಟ, ತಪ್ತಹಾಟಕನಿರ್ಯೂಹೈಃ-ಪುಟಪಾಕಶೋಧಿತವಾದ ಬಂಗಾರದಿಂದ ಮಾಡಲ್ಪಟ್ಟ ಓವಿಗಳುಳ್ಳ, ರಾಜತಾಮಲಪಾಂಡುರೈಃ-ಬೆಳ್ಳಿಯವಿಕಾರಗಳಾದ್ದರಿಂದಲೇ ನಿರ್ಮಲವಾಗಿಯೂ ಸ್ವಚ್ಛವಾಗಿಯೂ ಇರುವ, ವೈಡೂರ್ಯಕೃತಸೋಪಾನೈಃ-ವೈಡೂರ್ಯರತ್ನಗಳಿಂದ ನಿರ್ಮಿಸಲ್ಪಟ್ಟ ಪಾವ

ಭಿತವಾಗಿಯೂ, ಸಾಗರ ಧ್ವನಿಯಂತೆ ಗಂಭೀರವಾಗಿ ಮೊರೆಯುವ ಸಮುದ್ರದ ಮೇಲೆ ಬೀಸುವ ಗಾಳಿಯಿಂದ ಸೇವಿತವಾಗಿಯೂ ಪ್ರಬಲರಾಕ್ಷಸರಿಂದ ಕೂಡಿರುವದಾಗಿಯೂ, ಆ ಲಂಕಾಪುರಿಯೋಪಾದಿಯಲ್ಲಿ ಪ್ರಕಾಶಿಸುತ್ತಲಿರುವದಾಗಿಯೂ, ಗೃಹದ್ವಾರಗಳ ಮುಂಭಾಗದಲ್ಲಿ ಘೋಳಿಯುತ್ತಿರುವ ಮದ ಗಜಗಳುಳ್ಳ ಸರ್ಪರಾಜರಿಂದ ವ್ಯಾಪ್ತಮಾಗಿಯೂ, ಶುಭಕರವಾದ ಭೋಗವತೀ ನಗರದಂತಿರುವ, ಮಿಂಚುಗಳಿಂದ ಕೂಡಿದ ಕಾರ್ಮುಗಿಲುಗಳಿಂದ ವ್ಯಾಪ್ತವಾದ ಜ್ಯೋತಿರ್ಮಂಡಲದಿಂದ ನಿಷೇವಿತವಾದ, ಸಮುದ್ರದ ಮೇಲೆ ಬೀಸುವ ಮಂದ ಮಾರುತ ಸಂಚಾರದಿಂದ ಸಶೀತಲವಾದ, ಇಂದ್ರರಾಜಧಾನಿಯಂತೆ ಪ್ರಕಾಶಿಸುವ ದಿವ್ಯಸುವರ್ಣ ಪ್ರಾಕಾರದಿಂದ ಪರಿವೃತವಾದ, ಸಣ್ಣಘಂಟೆಗಳ ಸಮುದಾಯದಿಂದ ಧ್ವನಿಗೈಯ್ಯುವ ವೈಜಯಂತಿಗಳಿಂದಲಂಕೃತವಾದ, ರಾವಣಾಸುರನಿಂದ ಪರಿಪಾಲಿತವಾದ ಆ ಲಂಕೆಯನ್ನು ಅತಿವೇಗದಿಂದ ಆಕ್ರಮಿಸಿದವನಾಗಿ ಪ್ರಾಕಾರ ಮಧ್ಯಗತನಾದನು||೮-೩||

ಈ ಪ್ರಕಾರವಾಗಿ ಆ ಮಾರುತಿಯು ಲಂಕಾನಗರವನ್ನು ಪ್ರವೇಶಮಾಡಿ ಅದರ ದರ್ಶನದಿಂದ ಆಶ್ಚರ್ಯಾಕ್ರಾಂತಮನಸ್ಕನಾಗಿ, ಭಂಗಾರದ ಚೌಕಟ್ಟುಗಳಿಂದಲೂ, ವೈಡೂರ್ಯ ಮಣಿಕೃತವಾದ ಬಹಿರ್ವೇದಿಕೆಗಳಿಂದಲೂ, ವಜ್ರ ಸ್ಫಟಿಕ ಮುತ್ತುಗ

ವೈಡೂರ್ಯಕೃತಸೋಪಾನೈಃ ಸ್ಫಾಟಿಕಾಂತರಪಾಂಸುಭಿಃ।
ಚಾರುಸಂಜವನೋಪೇತೈಃ ಖಮಿವೋತ್ಪತಿತೈಃ ಶುಭೈಃ।
ಕ್ರೌಂಚಬರ್ಹಿಣಸಂಘುಷ್ಟೈ ರಾಜಹಂಸನಿಷೇವಿತೈಃ।
ತೂರ್ಯಾಭರಣನಿರ್ಘೋಷೈಸ್ಸರ್ವತಃ ಪ್ರತಿನಾದಿತಾಂ ॥೮-೧೧॥

ಕನಿರ್ಯೂಹೈಃ, ರಾಜತಶಾಮಲಪಾಂಡುರೈಃ, ವೈಡೂರ್ಯಕೃತಸೋಪಾನೈಃ, ಸ್ಫಾಟಿಕಾಂತರಪಾಂಸುಭಿಃ, ಚಾರುಸಂಜವನೋಪೇತೈಃ, ಖಂ, ಇವ, ಉತ್ಪತಿತೈಃ, ಶುಭೈಃ, ಕ್ರೌಂಚಬರ್ಹಿಣಸಂಘುಷ್ಟೈಃ, ರಾಜಹಂಸನಿಷೇವಿತೈಃ, ತೂರ್ಯಾಭರಣನಿರ್ಘೋಷೈಃ. ಸರ್ವತಃ, ಪ್ರತಿನಾದಿತಾಂ॥೮-೧೧॥

ಸ್ಫಾಟಿಕಾಂತರಪಾಂಸುಭಿಃ, ಚಾರುಸಂಜವನೋಪೇತೈಃ, ಖಂ, ಉತ್ಪತಿತೈಃ, ಶಿವಸ್ಥಿತೈಃ, ಶುಭೈಃ. ಕ್ರೌಂಚಬರ್ಹಿಣಸಂಘುಷ್ಟೈಃ,ರಾಜಹಂಸನಿಷೇವಿತೈಃ, ದ್ವಾರೈಃ, ಉಪಲಕ್ಷಿತಾಂ, ತೂರ್ಯಾಭರಣನಿರ್ಘೋಷೈಃ, ಸರ್ವತಃ ಪ್ರತಿನಾದಿತಾಂ ಪುರೀಂ ಸರ್ವತಃ ಆಲೋಕ್ಯ, ವಿಸ್ಮಯಾವಿಷ್ಟಹೃದಯಃ, ಬಭೂವ ॥೮-೧೧॥

ಟಿಗೆಗಳುಳ್ಳ, ಸ್ಫಾಟಿಕಾಂತರಪಾಂಸುಭಿಃ, ಸ್ಫಟಿಕವಿಕಾರಗಳಾದಮಧ್ಯೆ ಇರುವ ಧೂಳಿಗಳುಳ್ಳ, ಚಾರುಸಂಜವನೋಪೇತೈಃ-ಸೊಗಸಾದ ಚದರಗಳಾದ ಮನೆಗಳಿಂದ ಕೂಡಿಕೊಂಡಿರುವ, ಖಂ-ಅಂತರಿಕ್ಷವನ್ನು ಕುರಿತು, ಉತ್ಪತ್ತೈರಿವಸ್ಥಿತೈಃ-ಹಾರಿಹೋಗುವಂತಿರುವ, ಶುಭೈಃ-ಶುಭಕರಗಳಾದ, ಕ್ರೌಂಚಬರ್ಹಿಣಸಂಘುಷ್ಟೈಃ-ಕೊಕ್ಕರೆಗಳಿಂಲೂ ನವಿಲುಗಳಿಂದಲೂ ಶಬ್ದಾಯಮಾನಗಳಾದ, ರಾಜಹಂಸನಿಷೇವಿತೈಃ-ರಾಜಹಂಸಪಕ್ಷಿಗಳಿಂದಸೇವಿಸಲ್ಪಟ್ಟ, ದ್ವಾರೈಃ-ಬಾಗಿಲುಗಳಿಂದ, ಉಪಲಕ್ಷಿತಾಂ-ಕೂಡಿಕೊಂಡಿರುವ, ತೂರ್ಯಾಭರಣನಿರ್ಘೋಷೈಃ-ತುತ್ತೂರಿಗಳೂ ಒಡವೆಗಳೂ ಇವುಗಳಧ್ವನಿಗಳಿಂದ-ಸರ್ವತಃ-ಎಲ್ಲಾ ಕಡೆಯಲ್ಲೂ, ಪ್ರತಿನಾದಿತಾಂ- ಧ್ವನಿಮಾಡಲ್ಪಟ್ಟ, ಪುರೀಂ-ಪಟ್ಟಣವನ್ನು, ಸರ್ವತಃ-ಸರ್ವದಿಕ್ಕುಗಳಲ್ಲಿಯೂ, ಆಲೋಕ್ಯ-ನೋಡಿ, ವಿಸ್ಮಯಾವಿಷ್ಟಹೃದಯಃ-ಆಶ್ಚರ್ಯಭರಿತವಾದಹೃದಯವುಳ್ಳವನಾಗಿ, ಬಭೂವ-ಆದನು ॥೮-೧೧॥

ಳಿಂದಲೂ, ಪದ್ಮರಾಗ ಮಣಿಗಳಿಂದ ಕಟ್ಟಲ್ಪಟ್ಟ ನೆಲಗಳಿಂದಲೂ, ಪುಟಪಾಕ ಪರಿಶೋಭಿತಸುವರ್ಣನಿರ್ಮಿತ ಮಾದ ಗೃಹದ್ವಾರ ಪಾರ್ಶ್ವಗಳಲ್ಲಿರುವ ಆನೆಗಳಿಂದಲೂ, ವೈಡೂರ್ಯ ಮಣಿಕೃತವಾದ ಸಾವಟಿಕೆಗಳಿಂದಲೂ, ಸ್ಫಟಿಕಶಿಲಾ ಮಧ್ಯಭಾಗಗಳಲ್ಲಿ ರಾಕ್ಷಸಂಚಾರದಿಂದುಂಟಾದ ಧೂಳುಗಳಿಂದಲೂ, ಸುಂದರವಾದ ಸಭಾಮಂಟಪಗಳಿಂದಯುಕ್ತವಾಗಿ ಗಗನಮಂಡಲಕ್ಕೆ ಪಕ್ಷಿಯಂತೆ ಹಾರಲಿಚ್ಛಿಸುತಲಿಸೆಯೋ ಯಂಬಂತೆ ಕಾಣುತ್ತಿರುವದಾಗಿಯೂ, ಕ್ರೌಂಚ ಮಯೂರ ರಾಜಹಂಸ ಮುಂತಾದ ಪಕ್ಷಿಗಳ ಗಣಗಳಿಂದಲೂ, ಭೇರೀ ಮೃದಂಗ ಪಟಹಾದಿ ವಾದ್ಯ ವಿಶೇಷಗಳಿಂದಲೂ, ಮತ್ತು ಸ್ತ್ರೀಯರ ಕಾಲುಸರಪಣಿ ಕಡಗ ಮುಂತಾದ ಆಭರಣ ಧ್ವನಿಗಳಿಂದಲೂ, ನಾನಾದಿಕ್ಕುಗಳಲ್ಲಿಯೂ, ವಿದಿಕ್ಕುಗಳಲ್ಲಿಯೂ ಪ್ರತಿಧ್ವನಿಯನ್ನುಂಟುಮಾಡುತ್ತಿರುವ ಆ ರಾಕ್ಷಸ ರಾಜಧಾನಿಯನ್ನು ಯಲ್ಲಾಕಡೆಯಲ್ಲೂ ನೋಡಿ ಆಶ್ಚರ್ಯ ಭರಿತವಾದ ಮನಸ್ಸುಳ್ಳವನಾದನು॥೮-೧೧॥

ಮೂ॥* ವಸ್ವೋಕಸಾರಾಪ್ರತಿಮಾಂ ತಾಂ ವೀಕ್ಷ್ಯ ನಗರೀಂ ತತಃ
ಖಮಿವೋತ್ಪತಿತುಂ ಕಾಮಾಂ ಜಹರ್ಷ ಹನುಮಾನ್ ಕಪಿಃ॥೧॥
ತಾಂ ಸಮೀಕ್ಷ್ಯ ಪುರೀಂ ರಮ್ಯಾಂ ರಾಕ್ಷಸಾಧಿಪತೇಃಶುಭಾಂ।
ಅನುತ್ತಮಾಮೃದ್ಧಿಯುತಾಂ ಚಿಂತಯಾಮಾಸವೀರ್ಯವಾನ್॥೨॥

ಪದಚ್ಛೇದ

ವಸ್ವೋಕಸಾರಾಪ್ರತಿಮಾಂ, ತಾಂ, ವೀಕ್ಷ್ಯ, ನಗರೀಂ, ತತಃ, ಖಂ, ಇವ, ಉತ್ಪತಿತುಂ, ಕಾಮಾಂ, ಜಹರ್ಷ, ಹನುಮಾನ್, ಕಪಿಃ ॥೧॥

ತಾಂ, ಸಮೀಕ್ಷ್ಯ, ಪುರೀಂ, ರಮ್ಯಾಂ, ರಾಕ್ಷಸಾಧಿಪತೇಃ, ಶುಭಾಂ, ಅನುತ್ತಮಾಂ, ಋದ್ಧಿಯುತಾಂ, ಚಿಂತಯಾಮಾಸ, ವೀರ್ಯವಾನ್ ॥೨॥

ಅನ್ವಯ

ತತಃ ಕಪಿಃ ಹನುಮಾನ್ ವಸ್ವೋಕಸಾರಾಪ್ರತಿಮಾಂ ಖಂ, ಉತ್ಪತಿತುಂ ಕಾಮಾಂ ತಾಂ ನಗರೀಂ ವೀಕ್ಷ್ಯ ಜಹರ್ಷ॥೧॥

ವೀರ್ಯವಾನ್ ಸಃ, ಅನುತ್ತಮಾಂ, ಋದ್ಧಿಯುತಾಂ, ಶುಭಾಂ, ರಾಕ್ಷಸಾಧಿಪತೇಃ ತಾಂ ಪುರೀಂ ಸಮೀಕ್ಷ್ಯ, ಚಿಂತಯಾಮಾಸ ॥೨॥

ತತಃ-ಅನಂತರದಲ್ಲಿ, ಕಪಿಃ-ವಾನರೋತ್ತಮನಾದ, ಹನುಮಾನ್-ಮಾರುತಿಯು, ವಸ್ವೋಕಸಾರಾ-ಇಂದ್ರರಾಜಧಾನಿಯಾದ ಅಮರಾವತಿಗೆ, ಪ್ರತಿಮಾಂ-ಸಮಾನವಾದ, ಖಂ-ಅಂತರಿಕ್ಷವನ್ನು, ಉತ್ಪತಿತುಂ-ಮೇಲಕ್ಕೆ ಹಾರುವದಕ್ಕೆ, ಕಾಮಾಂ-ಅಪೇಕ್ಷಿಸುತ್ತಲಿರುವಂತೆ ಕಾಣುವ, ತಾಂ ನಗರೀಂ-ಆ ಲಂಕಾಪಟ್ಟಣವನ್ನು, ವೀಕ್ಷ್ಯ-ನೋಡಿ, ಜಹರ್ಷ-ಹರ್ಷಗೊಂಡನು ॥೧॥

ವೀರ್ಯವಾನ್-ಪರಾಕ್ರಮಶಾಲಿಯಾದ, ಸಃ-ಆ ಮಾರುತಿಯು, ಅನುತ್ತಮಾಂ-ಸರ್ವೋತ್ತಮವಾದ, ಋದ್ಧಿಯುತಾಂ-ಸಕಲಸಂಮೃದ್ಧಿಯಿಂದಲೂ ಕೂಡಿದ, ಶುಭಾಂ-ಮಂಗಳಕರವಾದ, ರಾಕ್ಷಸಾಧಿಪತೇಃ-ರಾವಣಾಸುರನ, ತಾಂಪುರೀಂ-ಆ ಲಂಕಾಪಟ್ಟಣವನ್ನು, ಸಮೀಕ್ಷ್ಯ-ನೋಡಿ, ಚಿಂತಯಾಮಾಸ-ಆಲೋಚಿಸುವದಕ್ಕೆ, ಪ್ರಾರಂಭಿಸಿದನು ॥೨॥

ವಾನರೋತ್ತಮನಾದ ಆ ಮಾರುತಿಯು ಇಂದ್ರ ರಾಜಧಾನಿಯಾದ ಅಮರಾವತಿಗೆ ತುಲ್ಯವಾದ ಗಗನಮಂಡಲವನ್ನು ಕುರಿತು ಪಕ್ಷಿಯಂತೆ ಹಾರಿ ಹೋಗುವದಕ್ಕೆ ಸಿದ್ಧವಾಗಿದೆಯೋ ಎಂಬಂತೆ ತೋರುತ್ತಿರುವ ಆ ಮಹಾನಗರಿಯನ್ನು ಯಲ್ಲಾಕಡೆಯಲ್ಲೂ ನೋಡಿ ಅತ್ಯಂತ ವಿಸ್ಮಯ ಭರಿತನಾದನು॥೧॥

ಪರಾಕ್ರಮಿಗಳೆಲ್ಲೆಲ್ಲಾ ಸರ್ವಶ್ರೇಷ್ಠನಾದ ಆ ಮಾರುತಿಯು, ಸರ್ವೋತ್ತಮನಾಗಿಯೂ, ಸರ್ವೈಶ್ವರ್ಯಗಳಿಂದಲೂ ಸಮೃದ್ಧವಾಗಿಯೂ, ಅತ್ಯಂತ ರಮಣೀಯವಾಗಿಯೂ ಕಲ್ಯಾಣಾಸ್ಪದವಾಗಿಯೂ ಇರುವ ಆ ರಾವಣಾಸುರನ ರಾಜಧಾನಿಯಾದ ಆ ಲಂಕಾ ಪಟ್ಟವನ್ನು ನೋಡಿ ಮನಸ್ಸಿನಲ್ಲಿ ಈ ಪರಿಯಾಗಿ ಯೋಚನೆ ಮಾಡತೊಡಗಿದನು॥೨॥

* (ವಸ್ವೋಕಸಾರಾ ಶಕ್ರಸ್ಯ ಪೂರ್ವಸ್ಯಾಂದಿಶಿವೈಪುರೀ ಎಂದು ಪುರಾಣವಚನ)

ಮೂ॥ ನೇಯಮನ್ಯೇನ ನಗರೀ ಶಕ್ಯಾಧರ್ಷಯಿತುಂ ಬಲಾತ್।
ರಕ್ಷಿತಾ ರಾವಣಬಲೈ ರುದ್ಯತಾಯುಧ ಧಾರಿಭಿಃ॥೧೪॥
ಕುಮುದಾಂಗದಯೋರ್ವಾಪಿ ಸುಷೇಣಸ್ಯ ಮಹಾ ಕಪೇಃ।
ಪ್ರಸಿದ್ಧೇಯಂ ಭವೇದ್ಭೂಮಿ ರ್ಮೈಂದ ದ್ವಿವಿದಯೋರಪಿ॥
ವಿವಸ್ವತ ಸ್ತನೂಜಸ್ಯ ಹರೇಶ್ಚ ಕುಶಪರ್ವಣಃ।
ಋಕ್ಷಸ್ಯ ಕೇತುಮಾಲಸ್ಯ ಮಮಚೈವ ಗತಿರ್ಭವೇತ್॥೧೫-೧೬॥

**ಪದಚ್ಛೇದ**

ನ, ಇಯಂ, ಅನ್ಯೇನ, ನಗರೀ, ಶಕ್ಯಾ, ಧರ್ಷಯಿತುಂ, ಬಲಾತ್, ರಕ್ಷಿತಾ, ರಾವಣ, ಬಲೈಃ, ಉದ್ಯತಾಯುಧಧಾರಿಭಿಃ ॥೧೪॥

ಕುಮುದಾಂಗದಯೋಃ, ವಾ, ಅಪಿ, ಸುಷೇಣಸ್ಯ, ಮಹಾಕಪೇಃ, ಪ್ರಸಿದ್ಧಾ, ಇಯಂ, ಭವೇತ್, ಭೂಮಿಃ, ಮೈಂದದ್ವಿವಿದಯೋಃ, ಅಪಿ, ವಿವಸ್ವತಃ, ತನೂಜಸ್ಯ, ಹರೇಃ, ಚ, ಕುಶಪರ್ವಣಃ ಋಕ್ಷಸ್ಯ, ಕೇತುಮಾಲಸ್ಯ, ಮಮ, ಚ, ಏವ, ಗತಿಃ, ಭವೇತ್ ॥೧೫-೧೬॥

**ಅನ್ವಯ**

ಉದ್ಯತಾಯುಧಧಾರಿಭಿಃ ರಾವಣಬಲೈಃ ಬಲಾತ್ ರಕ್ಷಿತಾ, ಇಯಂ ನಗರೀ ಅನ್ಯೇನ ಧರ್ಷಯಿತುಂ ನಶಕ್ಯಾ ॥೧೪॥

ಪ್ರಸಿದ್ಧಾ ಇಯಂ ಭೂಮಿಃ, ಕುಮುದಾಂಗದಯೋರ್ವಾ, ಮಹಾಕಪೇಃ ಸುಷೇಣಸ್ಯ, ಮೈಂದದ್ವಿವಿದಯೋರಪಿ, ವಿವಸ್ವತಃ ತನೂಜಸ್ಯ ಕುಶಪರ್ವಣಃ ಹರೇಶ್ಚ, ಋಕ್ಷಸ್ಯ, ಕೇತುಮಾಲಸ್ಯ, ಮಮಚ ಗತಿಃ ಭವೇತ್ ॥೧೫-೧೬॥

ಉದ್ಯತಾಯುಧಧಾರಿಭಿಃ, ಉದ್ಯತ-ಎತ್ತಲ್ಪಟ್ಟ, ಆಯುಧ-ಆಯುಧಗಳನ್ನು, ಧಾರಿಭಿಃ-ಧರಿಸಿಕೊಂಡಿರುವ, ರಾವಣಬಲೈಃ-ರಾವಣಾಸುರನ ಸೈನ್ಯಗಳಿಂದ, ಬಲಾತ್- ಸರ್ವಶಕ್ತಿಯಿಂದಲೂ, ರಕ್ಷಿತಾ-ಕಾಪಾಡಲ್ಪಟ್ಟಂಥ, ಇಯಂ ನಗರೀ-ಈಪಟ್ಟಣವು, ಅನ್ಯೇನ- ಮತ್ತೊಬ್ಬನಿಂದ, ಧರ್ಷಯಿತುಂ-ಆಕ್ರಮಿಸಲ್ಪಡುವದಕ್ಕೆ, ನಶಕ್ಯಾ-ಸಾಧ್ಯವಾದದ್ದಲ್ಲ ॥೧೪॥

ಪ್ರಸಿದ್ಧಾ-ಪ್ರವೇಶಿಸಲಸಾಧ್ಯವೆಂದು ಲೋಕಪ್ರಖ್ಯಾತವಾದ, ಇಯಂಭೂಮಿಃ-ಈಲಂಕಾಪ್ರದೇಶವು, ಕುಮುದಾಂಗದಯೋರ್ವಾ-ಕುಮುದ ಮತ್ತು ಅಂಗದ ಇವರುಗಳಿಗೂ, ಮಹಾಕಪೇಃ-ಕಪಿಶ್ರೇಷ್ಠನಾದ, ಸುಷೇಣಸ್ಯ-ಸುಷೇಣನಿಗೂ, ಮೈಂದದ್ವಿವಿದಯೋರಪಿ-ಮೈಂದನಿಗೂ ದ್ವಿವಿಧನಿಗೂ, ವಿವಸ್ವತಃ-ಸೂರ್ಯಭಗವಂತನ, ತನೂಜಸ್ಯ-ಪುತ್ರನಾದಸುಗ್ರೀವನಿಗೂ, ಕುಶಪರ್ವಣಃ ಹರೇಶ್ಚ-ಕುಶಪರ್ವನೆಂಬ ಕಪಿಗೂ, ಋಕ್ಷಸ್ಯ-ಜಾಂಬವಂತನಿಗೂ, ಕೇತುಮಾಲಸ್ಯ-ಕೇತುಮಾಲನಿಗೂ, ಮಮಚ-ಮಾರುತಿಯಾದನನಿಗೂ, ಗತಿಃ-ಹೊಂದುವದಕ್ಕೆ ಸಾಧ್ಯವಾದಸ್ಥಾನವಾಗಿ, ಭವೇತ್-ಆದೀತು ॥೧೫-೧೬॥

ಸರ್ವದಾ ಶಸ್ತ್ರಪಾಣಿಗಳಾದ ರಾವಣನ ಸೇನಾಜನಗಳಿಂದ ಸರ್ವ ಪ್ರಯತ್ನದಿಂದಲೂ ಕಾಪಾಡಲ್ಪಡುತಲಿರುವ ರಾವಣ ರಾಜಧಾನಿಯಾದ ಈ ಲಂಕಾಪಟ್ಟಣವನ್ನು ಯಾರು ತಾನೆ ಆಕ್ರಮಿಸಬಲ್ಲರು॥೧೪॥

ಶತ್ರುಗಳ ಪ್ರವೇಶಕ್ಕೆ ಅಸಾಧ್ಯವೆಂದು ಸರ್ವಲೋಕಪ್ರಸಿದ್ಧವಾದ ಈ ಲಂಕಾನಗ

32

ಮೂ॥ ಸವಿಾಕ್ಷ್ಯತು ಮಹಾಬಾಹೂ ರಾಘವಸ್ಯ ಪರಾಕ್ರಮಂ।
ಲಕ್ಷ್ಮಣಸ್ಯಚವಿಕ್ರಾಂತ ಮಭವತ್ಪ್ರೀತಿಮಾರ್ನ್ ಕಪಿಃ॥೧೭॥
ತಾಂರತ್ನವಸನೋಪೇತಾಂ ಗೋಷ್ಠಾಗಾರಾವತಂಸಕಾಂ।
ಯನ್ತ್ರಾಗಾರಸ್ತನೀಮೃದ್ಧಾಂ ಪ್ರಮದಾಮಿವಭೂಷಿತಾಂ।
ತಾಂನಷ್ಟತಿಮಿರಾಂ ದೀಪ್ತೈರ್ಭಾಸ್ವರೈಶ್ಚ ಮಹಾಗೃಹೈಃ।
ನಗರೀಂರಾಕ್ಷಸೇಂದ್ರಸ್ಯ ದದರ್ಶಸಮಹಾಕಪಿಃ॥೧೮-೧೯॥

ಪದಚ್ಛೇದ

ಸವಿಾಕ್ಷ್ಯ, ತು, ಮಹಾಬಾಹುಃ, ರಾಘವಸ್ಯ, ಪರಾಕ್ರಮಂ, ಲಕ್ಷ್ಮಣಸ್ಯ, ಚ ವಿಕ್ರಾಂತಂ, ಅಭವತ್, ಪ್ರೀತಿಮಾರ್ನ್ ಕಪಿಃ ॥೧೭॥

ತಾಂ, ರತ್ನವಸನೋಪೇತಾಂ, ಗೋಷ್ಠಾಗಾರಾವತಂಸಕಾಂ, ಯಂತ್ರಾಗಾರಸ್ತನೀಂ, ಋದ್ಧಾಂ ಪ್ರಮದಾಂ, ಇವ, ಭೂಷಿತಾಂ, ತಾಂ, ನಷ್ಟತಿಮಿರಾಂ, ದೀಪ್ತೈಃ, ಭಾಸ್ವರೈಃ, ಚ, ಮಹಾಗೃಹೈಃ, ನಗರೀಂ, ರಾಕ್ಷಸೇಂದ್ರಸ್ಯ, ದದರ್ಶ, ಸಃ, ಮಹಾಕಪಿಃ ॥೧೮-೧೯॥

ಅನ್ವಯ

ಮಹಾಬಾಹುಃ, ಕಪಿಃ, ರಾಘವಸ್ಯ, ಪರಾಕ್ರಮಂ, ಲಕ್ಷ್ಮಣಸ್ಯ ವಿಕ್ರಾಂತಂ, ಸವಿಾಕ್ಷ್ಯ ಪ್ರೀತಿಮಾರ್ನ್ ಅಭವತ್ ॥೧೭॥

ಸಃ ಮಹಾಕಪಿಃ, ರತ್ನವಸನೋಪೇತಾಂ, ಗೋಷ್ಠಾಗಾರವತಂಸಕಾಂ, ಯಂತ್ರಾಗಾರಸ್ತನೀಂ ಋದ್ಧಾಂ, ಭೂಷಿತಾಂ ಪ್ರಮದಾಮಿವಸ್ಥಿತಾಂ, ದೀಪ್ತೈಃ ಭಾಸ್ವರೈಃ ಚ, ಮಹಾಗೃಹೈಃ, ನಷ್ಟತಿಮಿರಾಂ, ರಾಕ್ಷಸೇಂದ್ರಸ್ಯ ತಾಂನಗರೀಂ ದದರ್ಶ, ಸಃ, ಮಹಾಕಪಿಃ ॥೧೮-೧೯॥

ಮಹಾಬಾಹುಃ-ಅತಿಶಯವಾದ ಭುಜಪರಾಕ್ರಮವುಳ್ಳ, ಕಪಿಃ-ಮಾರುತಿಯು, ರಾಘವಸ್ಯ-ಶ್ರೀರಾಮನ, ಪರಾಕ್ರಮಂ-ಪರಾಕ್ರಮವನ್ನು, ಲಕ್ಷ್ಮಣಸ್ಯ-ಲಕ್ಷ್ಮಣನ-ವಿಕ್ರಾಂತಂ-ವೀರ್ಯಶಕ್ತಿಯನ್ನು ಸವಿಾಕ್ಷ್ಯ-ನೋಡಿ, ಪ್ರೀತಿಮಾರ್ನ್-ಸಂತೋಷಚಿತ್ತನಾಗಿ, ಅಭವತ್-ಆದನು ॥೧೭॥

ಸಃ ಮಹಾಕಪಿಃ-ಆ ಹನುಮಂತನು, ರತ್ನವಸನೋಪೇತಾಂ-ಪದ್ಮರಾಗವುಂತಾದ ರತ್ನಗಳೆಂಬ ವಸ್ತ್ರಗಳಿಂದಯುಕ್ತವಾದ, ಗೋಷ್ಠಾಗಾರಾವತಂಸಕಾಂ- ಗೋಷ್ಠಾಗಾರ-ಆಕಳದೊಡ್ಡಿಗಳೇ, ಅವತಂಸಕಾಂ-ತಲೆಯ ಆಭರಣವಾಗಿ ಉಳ್ಳ, ಯಂತ್ರಾಗಾರಸ್ತನೀಂ-ಕಾರಂಜೀಮನೆಗಳೆಂಬ ಸ್ತನಗಳುಳ್ಳ ಋದ್ಧಾಂ-ಸಮೃದ್ಧಿಯನ್ನು ಪಡೆದಿರುವ, ಭೂಷಿತಾಂ-ಅಲಂಕರಿಸಲ್ಪಟ್ಟ, ಪ್ರಮದಾಮಿವಸ್ಥಿತಾಂ-ಹೆಂಗಸಿನೋಪಾದಿಯಲ್ಲಿರುವ, ಭಾಸ್ವರೈಃ-ಉಜ್ವಲಗಳಾದ, ದೀಪ್ತೈಃ-ಅಂತಃಪ್ರಕಾಶಮಾನಗಳಾದ, ಮಹಾಗೃಹೈಃ-ದೊಡ್ಡಮನೆಗಳಿಂದ, ನಷ್ಟತಿಮಿರಾಂ-ವಿನಷ್ಟವಾದ ಅಂಧಕಾರವುಳ್ಳ, ರಾಕ್ಷಸೇಂದ್ರಸ್ಯ-ರಾವಣಾಸುರನ, ತಾಂ ನಗರೀಂ-ಆ ಪಟ್ಟಣವನ್ನು, ದದರ್ಶ-ಕಂಡನು ॥೧೮-೧೯॥

ರಿಯನ್ನು ಪ್ರವೇಶಿಸುವದಕ್ಕೆ ಕುಮುದ ಅಂಗದ ಸುಷೇಣ ಮೈಂದ ದ್ವಿವಿದ ಸುಗ್ರೀವ ಕುಶ ಪರ್ವ ಜಾಂಬುವಂತ ಕೇತುಮಾಲ ಇವರುಗಳಿಗೂ ಮತ್ತು ನನಗೂ ಕಥಂಚಿತ್ ಸಾಧ್ಯವೇ ಹೊರ್ತು ಈ ನಮ್ಮಗಳನ್ನು ಬಿಟ್ಟರೆ ಬೇರೆ ಯಾರಿಗೂ ಇಲ್ಲಿಪ್ರವೇಶವು ಸುಖಕರವಾಗಿರುವದಿಲ್ಲ॥೧೫-೧೬॥

ಮೂ ॥ ಅಥಸಾಹರಿಶಾರ್ದೂಲಂ ಪ್ರವಿಶಂತಂಮಹಾಬಲಂ ।
ನಗರೀಸ್ವೇನರೂಪೇಣ ದದರ್ಶಪವನಾತ್ಮಜಂ ॥೨೦॥
ಸಾತಂಹರಿವರಂದೃಷ್ಟ್ವಾ ಲಂಕಾರಾವಣಪಾಲಿತಾ ।
ಸ್ವಯಮೇವೋತ್ಥಿತಾ ತತ್ರವಿಕೃತಾನನದರ್ಶನಾ ।
ಪುರಸ್ತಾತ್ಕಪಿವರ್ಯಸ್ಯ ವಾಯುಸೂನೋರತಿಷ್ಠತ ।
ಮುಂಚಮಾನಾ ಮಹಾನಾದ ಮಬ್ರವೀತ್ಪವನಾತ್ಮಜಂ ॥೨೧-೨೨॥

ಪದಚ್ಛೇದ

ಅಥ, ಸಾ, ಹರಿಶಾರ್ದೂಲಂ ಪ್ರವಿಶಂತಂ, ಮಹಾಬಲಂ, ನಗರೀ, ಸ್ವೇನ, ರೂಪೇಣ, ದದರ್ಶ, ಪವನಾತ್ಮಜಂ ॥೨೦॥

ಸಾ, ತಂ, ಹರಿವರಂ, ದೃಷ್ಟ್ವಾ, ಲಂಕಾ, ರಾವಣಪಾಲಿತಾ, ಸ್ವಯಂ, ಏವ, ಉತ್ಥಿತಾ, ತತ್ರ, ವಿಕೃತಾನನ ದರ್ಶನಾ॥ ಪುರಸ್ತಾತ್, ಕಪಿವರ್ಯಸ್ಯ, ವಾಯುಸೂನೋಃ, ಅತಿಷ್ಠತ, ಮುಂಚಮಾನಾ, ಮಹಾನಾದಂ, ಅಬ್ರವೀತ್, ಪವನಾತ್ಮಜಂ ॥೨೧-೨೨॥

ಅನ್ವಯ

ಅಥ ಸಾನಗರೀ, ಹರಿಶಾರ್ದೂಲಂ, ಪ್ರವಿಶಂತಂ, ಮಹಾಬಲಂ, ಪವನಾತ್ಮಜಂ, ಸ್ವೇನ, ರೂಪೇಣ, ದದರ್ಶ ॥೨೦॥

ತತ್ರ, ರಾವಣಪಾಲಿತಾ, ಸಾ ಲಂಕಾ, ತಂ ಹರಿವರಂ ದೃಷ್ಟ್ವಾ ಸ್ವಯಮೇವ, ಉತ್ಥಿತಾ, ವಿಕೃತಾನನದರ್ಶನಾ, ಕಪಿವರ್ಯಸ್ಯ, ವಾಯುಸೂನೋಃ ಪುರಸ್ತಾತ್. ಅತಿಷ್ಠತ, ಚ, ಮಹಾನಾದಂ, ಮುಂಚಮಾನಾ, ಪವನಾತ್ಮಜಂ, ಅಬ್ರವೀತ್ ॥೨೧-೨೨॥

ಅಥ-ಅನಂತರದಲ್ಲಿ, ಸಾ ನಗರೀ-ಆ ಲಂಕಾರಾಜಧಾನಿಯು, ಹರಿಶಾರ್ದೂಲಂ-ಕಪಿಶ್ರೇಷ್ಠನಾದ ಪ್ರವಿಶಂತಂ-ತನ್ನಲ್ಲಿಪ್ರವೇಶಮಾಡುತಲಿರುವಂಥಾ, ಮಹಾಬಲಂ-ಅತ್ಯಧಿಕಬಲವುಳ್ಳ, ಪವನಾತ್ಮಜಂ-ವಾಯುಪುತ್ರನಾದ ಆ ಮಾರುತಿಯನ್ನು, ಸ್ವೇನ-ಸ್ವಕೀಯವಾದ, ರೂಪೇಣ-ದೇವತಾರೂಪದಿಂದ, ದದರ್ಶ-ನೋಡಿದಳು ॥೨೦॥

ತತ್ರ-ಆ ಊರುಬಾಗಿಲಲ್ಲಿ, ರಾವಣಪಾಲಿತಾ-ರಾವಣನಿಂದರಕ್ಷಿಸಲ್ಪಟ್ಟ, ಸಾ ಲಂಕಾ-ಆ ಲಂಕಾಪಟ್ಟಣದ ಅಭಿಮಾನಿದೇವತೆಯು, ತಂ ಹರಿವರಂ-ಆವಾನರಶ್ರೇಷ್ಠನನ್ನು, ದೃಷ್ಟ್ವಾ-ನೋಡಿ,ಸ್ವಯಮೇವ-ತನ್ನಿಷ್ಟಕ್ಕೆ ತಾನೆಯೇ, ಉತ್ಥಿತಾ-ಎದ್ದವಳಾಗಿ, ವಿಕೃತಾನನದರ್ಶನಾ-ವಿಕಾರವಾದಮುಖವೂ ನೋಟವೂ ಉಳ್ಳವಳಾಗಿ, ಕಪಿವರ್ಯಸ್ಯ-ಕಪಿಶ್ರೇಷ್ಠನಾದ, ವಾಯುಸೂನೋಃ-ವಾಯುಪುತ್ರನಾದ ಆಂಜನೇಯನ, ಪುರಸ್ತಾತ್-ಮುಂದೆ, ಅತಿಷ್ಠತ-ನಿಂತಳು; ಚ-ಮತ್ತು, ಮಹಾನಾದಂ- ಮಹಾಧ್ವನಿಯನ್ನು ಮುಂಚಮಾನಾ-ಬಿಡುತಲಿರುವಳಾಗಿ, ಪವನಾತ್ಮಜಂ-ಮಾರುತಿಯನ್ನು ಕುರಿತು, ಅಬ್ರವೀತ್-ಹೇಳಿದಳು ॥೨೧-೨೨॥

ಪರಾಕ್ರಮಶಾಲಿಗಳಲ್ಲಿ ಪ್ರಥಮಗಣ್ಯನಾದ ಆ ಮಾರುತಿಯು ಆ ಲಂಕಾನಗರವನ್ನು ನೋಡಿ ವಿಷಣ್ಣಚಿತ್ತನಾಗಿದ್ದಾಗ್ಯೂ ಶ್ರೀ ರಾಮಚಂದ್ರನ ಪರಾಕ್ರಮವನ್ನು

ಮೂ ॥ ಕಸ್ತ್ವಂಕೇನಚಕಾರ್ಯೇಣ ಇಹಪ್ರಾಪ್ತೋವನಾಲಯ ।
ಕಥಯಸ್ವೇಹಯತ್ತತ್ತ್ವಂ ಯಾವತ್ಪ್ರಾಣಾಧರಂತಿತೇ ॥೨೩॥

| ಪದಚ್ಛೇದ | ಅನ್ವಯ |
| --- | --- |
| ತಃ, ತ್ವಂ, ಕೇನ, ಚ, ಕಾರ್ಯೇಣ, ಇಹ, ಪ್ರಾಪ್ತಃ; ವನಾಲಯ, ಕಥಯಸ್ವ, ಇಹ, ಯತ್, ತತ್ತ್ವಂ, ಯಾವತ್, ಪ್ರಾಣಾಃ, ಧರಂತಿ, ತೇ ॥೨೩॥ | ಹೇವನಾಲಯ, ತ್ವಂ ಕಃ, ಚ, ಕೇನ ಕಾರ್ಯೇಣ, ಇಹ, ಪ್ರಾಪ್ತಃ,ತೇ ಪ್ರಾಣಾಃ ಯಾವತ್ ಧರಂತಿ, ತಾವತ್, ಯತ್, ತತ್ತ್ವಂ, ತತ್ ಕಥಯಸ್ವ ॥೨೩॥ |

ಹೇವನಾಲಯ, ಎಲೈ ಅರಣ್ಯವಾಸಿಯಾದ ವಾನರನೇ, ತ್ವಂ-ನೀನು, ಕಃ-ಯಾರು, ಚ-ಮತ್ತು, ಕೇನಕಾರ್ಯೇಣ-ಯಾವಕೆಲಸದನಿಮಿತ್ತದಿಂದ, ಇಹ-ಈ ಸ್ಥಾನಕ್ಕೆ, ಪ್ರಾಪ್ತಃ-ಬಂದಿರುತ್ತೀಯೆ? ತೇ-ನಿನ್ನ, ಪ್ರಾಣಾಃ-ಉಸಿರುಗಳು, ಯಾವತ್-ಯಾವ್ಲೆಯವರೆಗೆ, ಧರಂತಿ-ಶರೀರದಲ್ಲಿ ಧರಿಸಲ್ಪಟ್ಟವುಗಳಾಗಿ ಇರುತ್ತವೆಯೊ, ತಾವತ್-ಅಷ್ಟರೊಳಗೆ, ಯತ್-ಯಾವದು, ತತ್ತ್ವಂ-ವಾಸ್ತವಸ್ಥಿಯೊ, ತತ್-ಅದನ್ನು, ಕಥಯಸ್ವ-ಹೇಳುವನಾಗು ॥೨೩॥

ಲಕ್ಷ್ಮಣನ ವೀರ್ಯಾತಿಶಯವನ್ನು ಸ್ಮರಿಸಿಕೊಂಡು ಲಂಕೆಯು ಪ್ರವೇಶಿಸಲಸಾಧ್ಯವಾದದೆಂಬ ಭಾವದಿಂದುಂಟಾದ ಖೇದವನ್ನು ಕಡಿಮೆ ಮಾಡಿಕೊಂಡು ಪುನಃ ಉತ್ಸಾಹ ಶೀಲನಾದನು ॥೧೭॥

ಪದ್ಮರಾಗ ಮೊದಲಾದ ವಿಚಿತ್ರ ವರ್ಣಗಳುಳ್ಳ ರತ್ನಗಳಿಂದ ಯುಕ್ತವಾದ್ದರಿಂದಲೇ, ಚಿತ್ರವಸ್ತ್ರಧಾರಿಯಾಗಿಯೂ, ಗೋಶಾಲೆಗಳೆಂಬ ತಲೆಗೆ ಧರಿಸುವ ಆಭರಣಯುಕ್ತವಾಗಿಯೂ, ಜಲಯಂತ್ರಗಳಿಂದ ಪರಿಶೋಭಿತವಾದಕಾರಣವೇ ಶ್ರೇಷ್ಠ ಸ್ತ್ರಾವಿಸ್ತನಗಳಿಂದ ಕೂಡಿಕೊಂಡಿರುವದಾಗಿಯೂ ಇರುವ, ಸರ್ವವಸ್ತು ಸಮೃದ್ಧವಾಗಿಯೂ ಇರುವ ಕಾರಣವೆ ಸರ್ವಾಭರಣ ಭೂಷಿತಳಾದ ಯುವತಿ ಸ್ತ್ರೀಯಂತೆ ಪ್ರಕಾಶಮಾನವಾಗಿಯೂ, ಸ್ಫುರತ್ತಾದ ನಾನಾವಿಧ ದೀಪಗಳಿಂದ ಯುಕ್ತಗಳಾದ ಗೃಹಗಳಿಂದ ಪರಿಶೋಭಿತವಾದ ಆ ರಾಕ್ಷಸೇಂದ್ರ ರಾಜಧಾನಿಯಾದ ಲಂಕಾನಗರಿಯನ್ನು ಆ ಮಾರುತಿಯು ಅವಲೋಕಿಸುವನಾದನು॥೧೮-೧೯॥

ಈ ಪ್ರಕಾರವಾಗಿ ಆ ಮಾರುತಿಯು ಆ ಲಂಕಾ ರಾಜಧಾನಿಯನ್ನು ಅತಿ ವಿಸ್ಮಯದಿಂದ ವೀಕ್ಷಿಸುತ್ತಿರುವಕಾಲದಲ್ಲಿ ಲಂಕಾರಾಜಧಾನಿಯ ಅಭಿಮಾನಿ ದೇವತೆಯು ತನ್ನ ಸ್ವಕೀಯವಾದ ದೇವತಾತ್ಮಕವಾದ ರೂಪವನ್ನು ಧರಿಸಿಕೊಂಡು ವಾನರ ಶ್ರೇಷ್ಠನಾದ ಮಹಾಬಲಶಾಲಿಯಾದ ಆ ಮಾರುತಿಯು ತನ್ನನ್ನು ಪ್ರವೇಶಮಾಡುವದನ್ನು ನೋಡಿ ತನ್ನ ದೇವತಾರೂಪದಿಂದ ಯುಕ್ತಳಾಗಿಯೇ ಆ ಮಾರುತಿಯನ್ನು ನೋಡುವಳಾದಳು॥೨೦॥

ನಶಕ್ಯಂಖಲ್ವಿಯಂ ಲಂಕಾಪ್ರವೇಷ್ಟುಂವಾನರತ್ವಯಾ ।
ರಕ್ಷಿತಾರಾವಣಬಲೈರಭಿ ಗುಪ್ತಾ ಸಮಂತತಃ ॥೨೪॥

| ಪದಚ್ಛೇದ | ಅನ್ವಯ |
|---|---|
| ನ, ಶಕ್ಯಂ, ಖಲು, ಇಯಂ, ಲಂಕಾ, ಪ್ರವೆಷ್ಟುಂ, ವಾನರ, ತ್ವಯಾ, ರಕ್ಷಿತಾ, ರಾವಣಬಲೈಃ, ಅಭಿಗುಪ್ತಾ, ಸಮಂತತಃ ॥೨೪॥ | ಹೆ ವಾನರ ಇಯಂ, ಲಂಕಾ, ರಾವಣ,ಬಲೈಃ ರಕ್ಷಿತಾ, ಸಮಂತತಃ, ಅಭಿಗುಪ್ತಾ, ಅತಃ ತ್ವಯಾ ಪ್ರವೆಷ್ಟುಂ, ನಶಕ್ಯಂ ॥೨೪॥ |

ಹೇವಾನರ-ಎಲೈ ಕಪಿಯೆ! ಇಯಂ ಲಂಕಾ-ಈ ಲಂಕೆಯು, ರಾವಣಬಲೈಃ-ರಾವಣಾಸುರನಸೈನ್ಯಗಳಿಂದ,ರಕ್ಷಿತಾ-ಕಾಪಾಡಲ್ಪಟ್ಟಿರುತ್ತದೆ, ಸಮಂತತಃ-ಎಲ್ಲಾಕಡೆಯಲ್ಲೂ, ಅಭಿಗುಪ್ತಾ-ಪಾಲಿಸಲ್ಪಟ್ಟಿರತಕ್ಕದ್ದಾಗಿದೆ, ಅತಃ-ಈ ಕಾರಣದಿಂದ, ತ್ವಯಾ-ನಿನ್ನಿಂದಾ, ಪ್ರವೇಷ್ಟುಂ-ಪ್ರವೇಶಮಾಡುವದಕ್ಕೆ, ನಶಕ್ಯಂ-ಸಾಧ್ಯವಲ್ಲವು ॥೨೪॥

ಈ ಪ್ರಕಾರವಾಗಿ ಪ್ರವೇಶಮಾಡಿರುವ ಆ ಮಾರುತಿಯನ್ನು ನೋಡಿ, ಆ ಲಂಕಾ ರಾಜಧಾನಿಯ ಅಭಿಮಾನಿದೇವತೆಯು ಕ್ಷಿಪ್ರದಲ್ಲಿ ಎದ್ದವಳಾಗಿ, ಮುಖವನ್ನೂ ತನ್ನ ನೋಟವನ್ನೂ ಕರಾಳವನ್ನಾಗಿ ಮಾಡಿಕೊಂಡು ಆ ಮಾರುತಿಯಮುಂದೆ ನಿಂತುಕೊಂಡು ಅತ್ಯುಚ್ಚ ಹವಾದ ಧ್ವನಿಯನ್ನು ಮಾಡುತ್ತಾ ಈ ರೀತಿಯಲ್ಲಿ ಹೇಳುವವಳಾದಳು ॥೨೧-೨೨॥

ಎಲೈ ವನಚರನೇ! ನೀನುಯಾರು, ನೀನು ಇಲ್ಲಿಗೆ ಬರುವದಕ್ಕೆ ನಿಮಿತ್ತವೇನು. ಅಪ್ಪಣೆ ಇಲ್ಲದೆ ಪ್ರವೇಶಿಸಿದ್ದಕ್ಕಾಗಿ ನಿನ್ನ ಪ್ರಾಣಗಳನ್ನು ಕಳೆದುಕೊಳ್ಳುತ್ತೀಯೆ. ನಿನ್ನ ಪ್ರಾಣಗಳುಶರೀರವನ್ನುಬಿಟ್ಟು ಹೋಗುವದೊರಳಗಾಗಿ ಯಥಾರ್ಥಸ್ಥಿತಿಯನ್ನು ನನಗೆ ತಿಳಿಸುವನಾಗು॥೨೩॥

ಎಲೈ ವಾನರನೇ! ಈ ಲಂಕಾನಗರಿಯು ಸಾಮಾನ್ಯವಾದ ನಗರಿಯೆಂದು ತಿಳಿಯಬ್ಯಾಡ, ಈ ಮಹಾಪಟ್ಟಣವು ಸರ್ವದಿಕ್ಕುಗಳಲ್ಲಿಯೂ ರಾವಣನ ಸೈನ್ಯದಿಂದ ಚನ್ನಾಗಿ ರಕ್ಷಿಸಲ್ಪಟ್ಟಿರುತ್ತದೆ. ಈ ಪಟ್ಣವನ್ನು ನೀನು ಪ್ರವೇಶಮಾಡುವದು ಸಾಧ್ಯ ವಾದದ್ದಲ್ಲ॥೨೪॥

ಮೂ ॥ ಅಥತಾಮಬ್ರವೀದ್ವೀರೋ ಹನುಮಾನಗ್ರತಃಸ್ಥಿತಾಂ ।
ಕಥಯಿಷ್ಯಾಮಿತೇ ತತ್ವಂ ಯನ್ಮಾಂತ್ವಂ ಪರಿಪೃಚ್ಛಸಿ ॥೨೫॥
ಕಾತ್ವಂ ವಿರೂಪನಯನಾ ಪುರದ್ವಾರೇವತಿಷ್ಠಸಿ ।
ಕಿಮರ್ಥಂಚಾಪಿಮಾಂ ರುಧ್ವಾನಿರ್ಭರ್ತ್ಸಯಸಿದಾರುಣಾ ॥೨೬॥

**ಪದಚ್ಛೇದ**

ಅಥ, ತಾಂ, ಅಬ್ರವೀತ್, ವೀರಃ, ಹನುಮಾನ್, ಅಗ್ರತಃ, ಸ್ಥಿತಾಂ, ಕಥಯಿಷ್ಯಾಮಿ, ತೇ, ತತ್ವಂ ಯತ್, ಮಾಂ, ತ್ವಂ, ಪರಿಪೃಚ್ಛಸಿ ॥೨೫॥

ಕಾ, ತ್ವಂ, ವಿರೂಪನಯನಾ, ಪುರದ್ವಾರೆ, ಅವತಿಷ್ಠಸಿ, ಕಿಮರ್ಥಂ, ಚ, ಅಪಿ, ಮಾಂ, ರುಧ್ವಾ, ನಿರ್ಭರ್ತ್ಸಯಸಿ, ದಾರುಣಾ ॥೨೬॥

**ಅನ್ವಯ**

ಅಥ ವೀರಃ ಹನುಮಾನ್ ಅಗ್ರತಃ ಸ್ಥಿತಾಂ ತಾಂ ಅಬ್ರವೀತ್ ಯತ್ ತತ್ವಂ ತ್ವಂ ಮಾಂ ಪರಿಪೃಚ್ಛಸಿ, ತತ್, ತೇ, ಕಥಯಿಷ್ಯಾಮಿ ॥೨೫॥

ವಿರೂಪನಯನಾ ತ್ವಂ ಕಾ, ಪುರದ್ವಾರೆ ಅವತಿಷ್ಠಸಿ, ಮಾಂ ರುಧ್ವಾ ದಾರುಣಾ ಕಿಮರ್ಥಂ ನಿರ್ಭರ್ತ್ಸಯಸಿ ॥೨೬॥

ಅಥ-ಅನಂತರದಲ್ಲಿ, ವೀರಃ-ಶೂರನಾದ, ಹನುಮಾನ್-ಮಾರುತಿಯು, ಅಗ್ರತಃ-ಮುಂದುಗಡೆಯಲ್ಲಿ, ಸ್ಥಿತಾಂ-ನಿಂತುಕೊಂಡಿರುವ, ತಾಂ-ಲಂಕಿಣಿಯನ್ನು ಕುರಿತು, ಅಬ್ರವೀತ್-ಹೇಳಿದ್ದೇನೆಂದರೆ - ತ್ವಂ-ನೀನು, ಯತ್ ತತ್ವಂ-ಯಾವ ಯಥಾರ್ಥಸ್ಥಿತಿಯನ್ನು, ಮಾಂ-ನನ್ನನ್ನು ಕುರಿತು, ಪರಿಪೃಚ್ಛಸಿ-ಪ್ರಶ್ನೆಮಾಡುತಲಿದೀಯೋ, ತತ್-ತತ್ವಂ ಅವಾಸ್ತವಸ್ಥಿತಿಯನ್ನು, ತೇ-ನಿನಗೆ, ಕಥಯಿಷ್ಯಾಮಿ-ಹೇಳುವೆನು ॥೨೫॥

ವಿರೂಪನಯನಾ-ಕರಾಳನೆತ್ರಗಳುಳ್ಳ, ತ್ವಂ-ನೀನು, ಕಾ-ಯಾರು, ಪುರದ್ವಾರೆ-ಪಟ್ಟಣದಬಾಗಿಲಿನಲ್ಲಿ, ಅವತಿಷ್ಠಸಿ-ಇರುತ್ತಿದ್ದೀಯೆ, ಅಪಿಚ-ಮತ್ತು, ಕಿಮರ್ಥಂ-ಯಾತಕ್ಕೋಸ್ಕರ, ಮಾಂ-ನನ್ನನ್ನು ರುಧ್ವಾ-ತಡದು, ದಾರುಣಾ, ಕ್ರೂರಳಾಗಿ, ನಿರ್ಭರ್ತ್ಸಯಸಿ-ಹೆದರಿಸುತ್ತಿದ್ದೀಯೆ? ॥೨೬॥

ಮೂರ್ತಿಮತ್ತಾಗಿ ತನ್ನ ಎದುರಿಗೆ ಬಂದು ನಿಂತಿರುವ ಆ ಲಂಕಿಣಿಯನ್ನು ಕುರಿತು ಆ ಮಾರುತಿಯು ಈ ರೀತಿಯಲ್ಲಿ ಉತ್ತರಕೊಟ್ಟನು. ಎಲೈ ಮಾನಿನಿಯೇ! ಯಾವ ಸಂಗತಿಯ ಯಥಾರ್ಥಸ್ಥಿತಿಯನ್ನು ತಿಳಿಯಲೋಸುಗ ನೀನು ನನ್ನನ್ನುಕುರಿತು ಪ್ರಶ್ನೆಯನ್ನು ಮಾಡುತ್ತಲಿರುವೆಯೋ ಅದರ ತತ್ವವನ್ನು ನಿನಗೆ ಅರುಹುವನಾಗುವೆನು ಕೇಳುವಳಾಗು॥೨೫॥

ಎಲೈ ಸ್ತ್ರೀಯೇ! ನೀನುಯಾರು, ಏತಕ್ಕೋಸ್ಕರ ಬಾಗಿಲಲ್ಲಿ ನಿಂತಿರುತ್ತೀಯೆ, ಕ್ರೂರಳಾಗಿ ನನ್ನನ್ನು ಗದರಿಸಿಕೊಂಡು ಭಯಪಡಿಸುವದರ ಪ್ರಯೋಜನವೇನು॥೨೬॥

ಮೂ॥ ಹನುಮದ್ವಚನಂಶ್ರುತ್ವಾ ಲಂಕಾಸಾಕಾಮರೂಪಿಣೀ ।
ಉವಾಚವಚನಂಕ್ರುದ್ಧಾ ಪರುಷಂಪವನಾತ್ಮಜಂ ॥೨೭॥
ಅಹಂ ರಾಕ್ಷಸರಾಜಸ್ಯ ರಾವಣಸ್ಯಮಹಾತ್ಮನಃ ।
ಆಜ್ಞಾಪ್ರತೀಕ್ಷಾದುರ್ಧರ್ಷಾ ರಕ್ಷಾಮಿನಗರೀಮಿಮಾಂ ॥೨೮॥

**ಪದಚ್ಛೇದ**

ಹನುಮದ್ವಚನಂ, ಶ್ರುತ್ವಾ, ಲಂಕಾ, ಸಾ ಕಾಮರೂಪಿಣೀ, ಉವಾಚ, ವಚನಂ, ಕ್ರುದ್ಧಾ ಪರುಷಂ, ಪವನಾತ್ಮಜಂ ॥೨೭॥

ಅಹಂ, ರಾಕ್ಷಸ ರಾಜಸ್ಯ, ರಾವಣಸ್ಯ, ಮಹಾತ್ಮನಃ, ಆಜ್ಞಾಪ್ರತೀಕ್ಷಾ, ದುರ್ಧರ್ಷಾ, ರಕ್ಷಾಮಿ, ನಗರೀಂ, ಇಮಾಂ ॥೨೮॥

**ಅನ್ವಯ**

ಕಾಮರೂಪಿಣೀ ಸಾ ಲಂಕಾ, ಹನುಮದ್ವಚನಂ ಶ್ರುತ್ವಾ, ಕ್ರುದ್ಧಾ ಸತೀ, ಪವನಾತ್ಮಜಂ, ಪರುಷಂ ವಚನಂ, ಉವಾಚ ॥೨೭॥

ಅಹಂ ರಾಕ್ಷಸರಾಜಸ್ಯ, ಮಹಾತ್ಮನಃ, ರಾವಣಸ್ಯ, ಆಜ್ಞಾಪ್ರತೀಕ್ಷಾ, ದುರ್ಧರ್ಷಾ, ಇಮಾಂ ನಗರೀಂ, ರಕ್ಷಾಮಿ ॥೨೮॥

ಕಾಮರೂಪಿಣೀ-ಇಚ್ಛಾಧೀನವಾದರೂಪವುಳ್ಳ, ಸಾ ಲಂಕಾ-ಆ ಲಂಕಾಭಿಮಾನ ದೇವತೆಯು, ಹನುಮದ್ವಚನಂ-ಆಂಜನೇಯನವಾಕ್ಯವನ್ನು, ಶ್ರುತ್ವಾ-ಕೇಳಿ, ಕ್ರುದ್ಧಾಸತೀ-ಕೋಪಗೊಂಡವಳಾಗಿ, ಪವನಾತ್ಮಜಂ-ವಾಯುಪುತ್ರನಾದ ಮಾರುತಿಯನ್ನು ಕುರಿತು, ಪರುಷಂ-ಕಠಿನವಾದ, ವಚನಂ-ವಾಕ್ಯವನ್ನು, ಉವಾಚ-ಹೇಳಿದಳು ೨೭॥

ಅಹಂ-ನಾನು, ರಾಕ್ಷಸರಾಜಸ್ಯ-ರಾಕ್ಷಸಾಧಿಪತಿಯಾದ, ಮಹಾತ್ಮನಃ-ಮಹಾನುಭಾವನಾದ, ರಾವಣಸ್ಯ-ರಾವಣಾಸುರನ, ಆಜ್ಞಾಪ್ರತೀಕ್ಷಾ-ಆಜ್ಞೆಯನ್ನು ನಿರೀಕ್ಷಿಸಿಕೊಂಡಿರತಕ್ಕವಳು, ದುರ್ಧರ್ಷಾ-ಯಾರಿಂದಲೂ ಬಲಾತ್ಕಾರದಿಂದ ಆಕ್ರಮಿಸಲ್ಪಡುವದಕ್ಕೆ ಸಾಧ್ಯಳಾದವಳಲ್ಲವಾಗಿ, ಇಮಾಂ ನಗರೀಂ-ಈ ಲಂಕಾಪಟ್ಟಣವನ್ನು, ರಕ್ಷಾಮಿ-ಕಾಪಾಡುತಲಿದೇನೆ ॥೨೮॥

ಕಾಮರೂಪಿಣಿಯಾದ ಆ ಲಂಕಿಣಿಯು, ಮಾರುತಿಯವಾಕ್ಯವನ್ನು ಕೇಳಿದಮಾತ್ರದಿಂದಲೇ ಅತಿಯಾಗಿ ಖ್ಯಾತಿಗೊಂಡು ಈ ಪ್ರಕಾರವಾದ ಕಠಿನೋಕ್ತಿಯಿಂದ ಮಾರುತಿಯನ್ನು ಕುರಿತು ಹೇಳುವಳಾದಳು॥೨೭॥

ಎಲೈ. ವಾನರನೆ ನಾನು ರಾಕ್ಷಸ ಸಾರ್ವಭೌಮನಾದ ಮಹಾಮಹಿಮನಾದ ರಾವಣಾಸುರನ ಆಜ್ಞಾವಶವರ್ತಿನಿಯಾಗಿ ಸುರರಿಂದಲಾಗಲೀ ನರರಿಂದಲಾಗಲೀ ವಾನರರಿಂದಲಾಗಲೀ ಬಲಾತ್ಕಾರಪಡಿಸಿ ಆಕ್ರಮಿಸಲ್ಪಡುವದಕ್ಕೆ ಸರ್ವಥಾಸಾಧ್ಯಳಾದವಳಲ್ಲವಾಗಿ ಸಂತತವಾಗಿ ಈಮಹಾನಗರಿಯನ್ನು ಕಾಪಾಡುತ್ತಲಿದೇನೆ॥ ೨೮ ॥

ಮೂ ॥ ನಶಕ್ಯಾಮಾಮವಜ್ಞಾಯ ಪ್ರವೇಷ್ಟುಂನಗರೀತ್ವಯಾ ।
ಅದ್ಯಪ್ರಾಣೈಃ ಪರಿತ್ಯಕ್ತಃ ಸ್ವಪ್ಸ್ಯಸೇನಿಹತೋಮಯಾ ॥೨೯॥
ಅಹಂಹಿನಗರೀಲಂಕಾ ಸ್ವಯಮೇವಪ್ಲವಂಗಮ ।
ಸರ್ವತಃಪರಿರಕ್ಷಾಮಿ ಹ್ಯೇತತ್ತೇಕಥಿತಂಮಯಾ ॥೩೦॥

ಪದಚ್ಛೇದ

ನ, ಶಕ್ಯಾ, ಮಾಂ, ಅವಜ್ಞಾಯ, ಪ್ರವೆಷ್ಟುಂ, ನಗರೀ, ತ್ವಯಾ, ಅದ್ಯ, ಪ್ರಾಣೈಃ, ಪರಿತ್ಯಕ್ತಃ, ಸ್ವಪ್ಸ್ಯಸೆ, ನಿಹತಃ, ಮಯಾ ॥೨೯॥
ಅಹಂ, ಹಿ, ನಗರೀ, ಲಂಕಾ, ಸ್ವಯಂ, ಏವ, ಪ್ಲವಂಗಮ, ಸರ್ವತಃ, ಪರಿರಕ್ಷಾಮಿ, ಹಿ, ಏತತ್ ತೆ, ಕಥಿತಂ, ಮಯಾ ॥೩೦॥

ಅನ್ವಯ

ಮಾಂ ಅವಜ್ಞಾಯ ನಗರೀ ತ್ವಯಾ ಪ್ರವೆಷ್ಟುಂ, ನಶಕ್ಯಾ, ಅದ್ಯ ಮಯಾ ನಿಹತಃ, ಪ್ರಾಣೈಃ ಪರಿತ್ಯಕ್ತಃ ಸ್ವಪ್ಸ್ಯಸೆ ॥೨೯॥
ಹೆ ಪ್ಲವಂಗಮ, ಹಿ, ಅಹಂ ಲಂಕಾ ನಗರೀ ತತ್, ಸರ್ವತಃ ಪರಿರಕ್ಷಾಮಿ; ಏತತ್, ತೆ, ಮಯಾ, ಕಥಿತಂ ॥೩೦॥

ಮಾಂ-ನನ್ನನ್ನು, ಅವಜ್ಞಾಯ-ತಿರಸ್ಕಾರಮಾಡಿ, ನಗರೀ-ಈ ಲಂಕಾಪಟ್ಟಣವು, ತ್ವಯಾ-ನಿನ್ನಿಂದಾ, ಪ್ರವೆಷ್ಟುಂ-ಪ್ರವೆಶಮಾಡುವದಕ್ಕೆ, ನಶಕ್ಯಾ-ಸಾಧ್ಯವಾದದ್ದಲ್ಲ; ಅದ್ಯ-ಈಗ, ಮಯಾ-ನನ್ನಿಂದ, ನಿಹತಃ-ಕೊಲ್ಲಲ್ಪಟ್ಟವನಾಗಿ, ಪ್ರಾಣೈಃ-ಪ್ರಾಣಗಳಿಂದ, ಪರಿತ್ಯಕ್ತಃ-ಬಿಡಲ್ಪಟ್ಟವನಾಗಿ, ಸ್ವಪ್ಸ್ಯಸೆ-ಮಲಗಿಕೊಳ್ಳುವೆ ॥೨೯॥

ಹೆ ಪ್ಲವಂಗಮ-ಎಲೈ ವಾನರನೇ, ಹಿ-ಯಾವಕಾರಣದದೆಸೆಯಿಂದ, ಅಹಂ-ನಾನು, ಲಂಕಾ ನಗರೀ-ಲಂಕಾ ಪಟ್ಟಣವೋ, ತತ್-ಆ ಕಾರಣದದೆಸೆಯಿಂದ, ಸರ್ವತಃ-ಎಲ್ಲಾ ಕಡೆಯಲ್ಲೂ, ಪರಿರಕ್ಷಾಮಿ-ಕಾಪಾಡಲ್ಪಡುತ್ತೆನೆ. ಏತತ್-ಇದು, ತೆ-ನಿನಗೆ, ಮಯಾ-ನನ್ನಿಂದ, ಕಥಿತಂ-ಹೇಳಲ್ಪಟ್ಟಿದೆ ॥೩೦॥

ಎಲೈ ವಾನರನೇ ನನನ್ನು ತಿರಸ್ಕರಿಸಿ ಈ ಲಂಕಾನಗರಿಯನ್ನು ಪ್ರವೇಶ ಮಾಡುತ್ತೇನೆಂದು ಸಾಹಸವಾದ ಪ್ರಯತ್ನಮಾಡಿ ವ್ಯರ್ಥಯತ್ನನಾಗುತ್ತೀಯೆ, ನನ್ನನ್ನು ಪ್ರವೇಶಿಸುವದು ಸಾಧ್ಯವಲ್ಲ. ಈ ಸಾಹಸಕ್ಕಾಗಿ ಈ ದಿವಸ ನನ್ನಿಂದಸಂಹರಿಸಲ್ಪಟ್ಟು ಪ್ರಾಣಗಳನ್ನು ಕಳದುಕೊಂಡು ದೀರ್ಘನಿದ್ರೆಯನ್ನು ಮಾಡುವನಾಗುತ್ತೀಯೆ ॥೨೯॥

ಓ ವಾನರನೇ ನಾನು ಈ ಪಟ್ಟಣದ ಅಧಿದೇವತೆಯು, ಆದ್ದರಿಂದ ಈ ಲಂಕಾ ನಗರಿಯನ್ನು ನಾನಾಕಡೆಯಲ್ಲೂ ಭದ್ರವಾಗಿರುವಂತೆ ಸಂರಕ್ಷಣೆಮಾಡುತ್ತಲಿದ್ದೇನೆ. ಈ ಆ ಶಯವನ್ನು ನಿನಗೆನಾನು ಹೇಳಿರುತ್ತೇನೆ ತಿಳಿದುಕೊಳ್ಳುವನಾಗು ॥೩೦॥

ಮೂ॥ ಲಂಕಾಯಾ ವಚನಂ ಶ್ರುತ್ವಾಹನುಮಾನ್ಮಾರುತಾತ್ಮಜಃ ।
ಯತ್ನವಾನ್ ಸಹರಿಶ್ರೇಷ್ಠಸ್ಥಿತಶ್ಶೈಲ ಇವಾಪರ ॥೩೧॥
ಸತಾಂ ಸ್ತ್ರೀರೂಪ ವಿಕೃತಾಂ ದೃಷ್ಟ್ವಾವಾನರ ಪುಂಗವಃ ॥
ಅಬಭಾಷೇ ಥಮೇಧಾವೀಸತ್ತ್ವವಾನ್ಪ್ಲವಗರ್ಷಭಃ ॥೩೨॥

**ಪದಚ್ಛೇದ**

ಲಂಕಾಯಾಃ, ವಚನಂ, ಶ್ರುತ್ವಾ, ಹನುಮಾನ್, ಮಾರುತಾತ್ಮಜಃ, ಯತ್ನವಾನ್, ಸಃ, ಹರಿಶ್ರೇಷ್ಠಃ, ಸ್ಥಿತಃ ಶೈಲಃ ಇವ, ಅಪರಃ ॥೩೧॥

ಸಃ-ತಾಂ, ಸ್ತ್ರೀರೂಪವಿಕೃತಾಂ, ದೃಷ್ಟ್ವಾ, ವಾನರಪುಂಗವಃ, ಅಬಭಾಷೇ, ಅಥ, ಮೇಧಾವೀ, ಸತ್ತ್ವವಾನ್, ಪ್ಲವಗರ್ಷಭಃ ॥೩೨॥

**ಅನ್ವಯ**

ಹರಿಶ್ರೇಷ್ಠಃ, ಮಾರುತಾತ್ಮಜಃ, ಸಃ, ಹನುಮಾನ್, ಲಂಕಾಯಾಃ ವಚನಂ, ಶ್ರುತ್ವಾ, ಯತ್ನವಾನ್, ಅಪರಃ ಶೈಲ ಇವಸ್ಥಿತಃ ॥೩೧॥

ಅಥ, ಪ್ಲವಗರ್ಷಭಃ, ಮೇಧಾವೀ, ಸತ್ತ್ವವಾನ್ ಸಃ, ವಾನರಪುಂಗವಃ, ಸ್ತ್ರೀರೂಪವಿಕೃತಾಂ, ತಾಂ, ದೃಷ್ಟ್ವಾ, ಅಬಭಾಷೇ ॥೩೨॥

ಹರಿಶ್ರೇಷ್ಠಃ-ಕಪಿಶ್ರೇಷ್ಠನಾದ, ಮಾರುತಾತ್ಮಜಃ-ವಾಯುಪುತ್ರನಾದ, ಸಃ ಹನುಮಾನ್-ಆ ಮಾರುತಿಯು, ಲಂಕಾಯಾಃ-ಲಂಕಾಧಿದೇವತೆಯು, ವಚನಂ-ಮಾತನ್ನು, ಶ್ರುತ್ವಾ-ಕೇಳಿ, ಯತ್ನವಾನ್-ಪ್ರಯತ್ನವುಳ್ಳವನಾಗಿ, ಅಪರಃ-ಮತ್ತೊಂದಾದ, ಶೈಲಇವ-ಪರ್ವತಪ್ರೋಪಾದಿಯುಳ್ಳ, ಸ್ಥಿತಃ-ನಿಲ್ಲುವನಾದನು ॥೩೧॥

ಅಥ-ಅನಂತರದಲ್ಲಿ, ಪ್ಲವಗರ್ಷಭಃ- ದಾಟುವವರಲ್ಲಿ ಶ್ರೇಷ್ಠನಾದ, ಮೇಧಾವೀ-ಪ್ರಶಸ್ತ ಮೇಧಸ್ಸುಳ್ಳ, ಸತ್ತ್ವವಾನ್-ಬಲಶಾಲಿಯಾದ, ಸಃ ವಾನರಪುಂಗವಃ-ಕಪಿಪ್ರವರನಾದ ಆ ಮಾರುತಿಯು, ಸ್ತ್ರೀರೂಪವಿಕೃತಾಂ-ಹೆಂಗಸಿನ ಆಕೃತಿಯಿಂದ ಕರಾಳವಾಗಿ ಕಾಣುವ, ತಾಂ-ಆ ಲಂಕಾದೇವತೆಯನ್ನು, ದೃಷ್ಟ್ವಾ-ನೋಡಿ, ಅಬಭಾಷೇ-ಹೇಳಿದನು ॥೩೨॥

ಕಪಿಕುಲಾಗ್ರಣಿಯಾದ ಆ ವಾತಾತ್ಮಜನಾದ ಮಾರುತಿಯು ಲಂಕಾಧಿ ದೇವತೆಯು ಹೇಳುವ ವಚನವನ್ನು ಕೇಳಿದವನಾಗಿ, ಬಹಳವಾದ ಪ್ರಯತ್ನದಿಂದ ಪರ್ವತಪ್ರೋಪಾದಿ ಯಲ್ಲಿ ಸ್ತಬ್ಧನಾಗಿ ನಿಲ್ಲುವನಾದನು॥೩೧॥

ಮಹಾ ಮೇಧಶ್ಶಾಲಿಯೂ ಬಾಹುಬಲಪೂರ್ಣನಾಗಿಯೂ ಇರುವ ಆ ಮಾರುತಿ ಯು, ವಿಕಾರವಾದ ಸ್ತ್ರೀ ರೂಪವನ್ನು ಧರಿಸಿದ್ದ ಆ ಲಂಕಾಧಿದೇವತೆಯನ್ನು ನೋಡಿ ಈ ರೀತಿಯಲ್ಲಿ ಮಾತನಾಡುವನಾದನು॥೩೨॥

ಮೂ॥ ದ್ರಕ್ಷ್ಯಾಮಿ ನಗರೀಂ ಲಂಕಾಂ ಸಾಟ್ಟಪ್ರಾಕಾರತೋರಣಾಂ ।
ಇತ್ಯರ್ಥಮಿಹ ಸಂಪ್ರಾಪ್ತಃ ಪರಂ ಕೌತೂಹಲಂಹಿಮೆ ॥೩೩॥
ವನಾನ್ಯುಪವನಾನೀಹ ಲಂಕಾಯಾಃಕಾನನಾನಿಚ।
ಸರ್ವತೋ ಗೃಹಮುಖ್ಯಾನಿ ದ್ರಷ್ಟು ಮಾಗಮನಂಹಿಮೆ॥೩೪॥
ತಸ್ಯ ತದ್ವಚನಂಶ್ರುತ್ವಾ ಲಂಕಾ ಸಾಕಾಮ ರೂಪಿಣೀ।
ಭೂಯಏವ ಪುನರ್ವಾಕ್ಯಂ ಬಭಾಷೆ ಪರುಷಾಕ್ಷರಂ॥೩೫॥

**ಪದಚ್ಛೇದ**

ದ್ರಕ್ಷ್ಯಾಮಿ, ನಗರೀಂ, ಲಂಕಾಂ, ಸಾಟ್ಟಪ್ರಾಕಾರತೋರಣಾಂ, ಇತ್ಯರ್ಥಂ, ಇಹ, ಸಂಪ್ರಾಪ್ತಃ, ಪರಂ, ಕೌತೂಹಲಂ, ಹಿ, ಮೆ ॥೩೩॥

ವನಾನಿ, ಉಪವನಾನಿ, ಇಹ, ಲಂಕಾಯಾಃ, ಕಾನನಾನಿ, ಚ, ಸರ್ವತಃ, ಗೃಹಮುಖ್ಯಾನಿ, ದ್ರಷ್ಟುಂ, ಆಗಮನಂ, ಹಿ, ಮೆ ॥೩೪॥

ತಸ್ಯ, ತತ್, ವಚನಂ, ಶ್ರುತ್ವಾ, ಲಂಕಾ, ಸಾ, ಕಾಮರೂಪಿಣೀ, ಭೂಯಃ, ಏವ, ಪುನಃ, ವಾಕ್ಯಂ, ಬಭಾಷೆ, ಪರುಷಾಕ್ಷರಂ ॥೩೫॥

**ಅನ್ವಯ**

ಹಿ, ಮೆ, ಪರಂ ಕೌತೂಹಲಂ, ತತ್ ಸಾಟ್ಟಪ್ರಾಕಾರತೋರಣಾಂ, ಲಂಕಾಂ ನಗರೀಂ ದ್ರಕ್ಷ್ಯಾಮಿ, ಇತ್ಯರ್ಥಂ, ಇಹ ಸಂಪ್ರಾಪ್ತಃ ॥೩೩॥

ಇಹ ಲಂಕಾಯಾಃ, ವನಾನಿ, ಉಪವನಾನಿ, ಕಾನನಾನಿ, ಗೃಹಮುಖ್ಯಾನಿಚ, ಸರ್ವತಃ ದ್ರಷ್ಟುಂ, ಮೆ, ಆಗಮನಂ ಹಿ ॥೩೪॥

ಕಾಮರೂಪಿಣೀ ಸಾ ಲಂಕಾ, ತಸ್ಯ, ತದ್ವಚನಂ ಶ್ರುತ್ವಾ, ಭೂಯಃ ಪರುಷಾಕ್ಷರಂ, ವಚನಮೇವ, ಬಭಾಷೆ ॥೩೫॥

ಹಿ-ಯಾವಕಾರಣದಿಸೆಯಿಂದ, ಮೆ-ನನಗೆ, ಪರಂ-ಹೆಚ್ಚಾದ, ಕೌತೂಹಲಂ-ಕುತುಹಲವೊ, ತತ್-ಆ ಕಾರಣದದೆಸೆಯಿಂದ, ಸಾಟ್ಟಪ್ರಕಾರತೋರಣಾಂ-ಬುರುಜುಗಳಿಂದಲೂ, ಕೋಟೆಗಳಿಂದಲೂ, ಊರುಬಾಗಿಲುಗಳಿಂದಲೂ ಕೂಡಿಕೊಂಡಿರುವ, ಲಂಕಾಂ ನಗರೀಂ-ಲಂಕಾಪಟ್ಟಣವನ್ನು. ದ್ರಕ್ಷ್ಯಾಮಿ-ನೋಡುವೆನು, ಇತ್ಯರ್ಥಂ-ಈ ಪ್ರಯೋಜನಕ್ಕೋಸ್ಕರ,ಇಹ-ಇಲ್ಲಿಗೆ, ಸಂಪ್ರಾಪ್ತಃ-ಬಂದವನಾಗಿಧೇನೆ

ಇಹ-ಈ ಸ್ಥಳದಲ್ಲಿ, ಲಂಕಾಯಾಃ-ಲಂಕೆಯ, ವನಾನಿ-ವನಗಳನ್ನು, ಉಪವನಾನಿ- ಉದ್ಯಾನವನಗಳನ್ನು, ಕಾನನಾನಿ-ಅರಣ್ಯಗಳನ್ನು, ಗೃಹಮುಖ್ಯಾನಿ-ಪ್ರಮುಖಗಳಾದಮನೆಗಳನ್ನು, ಸರ್ವತಃ-ಎಲ್ಲಾಕಡೆಯಲ್ಲೂ, ದ್ರಷ್ಟುಂ-ನೋಡುವದಕ್ಕೋಸ್ಕರ,ಮೆ-ನನ್ನ, ಆಗಮನಂಹಿ ಆಗಮನವಾಗಿದೆ ॥೩೪॥

ಕಾಮರೂಪಿಣೀ-ಇಚ್ಛಾಧೀನವಾದರೂಪವುಳ್ಳ, ಸಾ ಲಂಕಾ-ಆ ಲಂಕಾದೇವತೆಯು, ತಸ್ಯ-ಆ ಮಾರುತಿಯ, ತದ್ವಚನಂ-ಆ ವಚನವನ್ನು, ಶ್ರುತ್ವಾ-ಕೇಳಿ, ಭೂಯಃ-ಬಹಳವಾಗಿ, ಪರುಷಾಕ್ಷರಂ-ಕಠಿಣಶಬ್ದಗಳುಳ್ಳ, ವಚನಮೇವ-ವಾಕ್ಯವನ್ನೇ. ಪುನಃ-ಮತ್ತು, ಬಭಾಷೆ-ಹೇಳುವಳಾದಳು ॥೩೫॥

ನನಗೆ ಲೋಕದವಸ್ತುಗಳನ್ನು ನೋಡುವದರಲ್ಲಿ ಕುತೂಹಲ, ಆದ್ದರಿಂದ ನಾನಾವಿಧ ಕೋಟೆ ಕೊತ್ತಲುಗಳಿಂದ ರಮ್ಯವಾದ ಈ ಲಂಕಾನಗರಿಯನ್ನು ನೋಡುವದಕ್ಕಾಗಿ ಇಲ್ಲಿಗೆ ಬಂದಿರುತ್ತೇನೆ॥೩೩॥

ಮೂ॥ ಮಾಮನಿರ್ಜಿತ್ಯ ದುರ್ಬುದ್ಧೇ ರಾಕ್ಷಸೇಶ್ವರ ಪಾಲಿತಾಮ್।
ನಶಕ್ಯಮದ್ಯ ತೇದ್ರಷ್ಟುಂ ಪುರೀಯಂ ವಾನರಾಧಮ॥೩೬॥
ತತಸ್ಸ ಕಪಿಶಾರ್ದೂಲ ಸ್ತಾಮುವಾಚ ನಿಶಾಚರೀಮ್।
ದೃಷ್ಟ್ವಾ ಪುರೀಮಿಮಾಂ ಭದ್ರೇ ಪುನರ್ಯಾಸ್ಯೇ ಯಥಾಗತಂ॥೩೭॥

ಪದಚ್ಛೇದ

ಮಾಂ, ಅನಿರ್ಜಿತ್ಯ, ದುರ್ಬುದ್ಧೇ, ರಾಕ್ಷಸೇಶ್ವರಪಾಲಿತಾಮ್, ನ, ಶಕ್ಯಂ, ಅದ್ಯ, ತೇ, ದ್ರಷ್ಟುಂ, ಪುರೀ, ಇಯಂ, ವಾನರಾಧಮ ॥೩೬॥

ತತಃ, ಸಃ, ಕಪಿಶಾರ್ದೂಲಃ, ತಾಂ, ಉವಾಚ, ನಿಶಾಚರೀಮ್, ದೃಷ್ಟ್ವಾ, ಪುರೀಂ, ಇಮಾಂ, ಭದ್ರೇ, ಪುನಃ, ಯಾಸ್ಯೇ, ಯಥಾಗತಮ್ ॥೩೭॥

ಅನ್ವಯ

ದುರ್ಬುದ್ಧೇ ಹೇ ವಾನರಾಧಮ, ರಾಕ್ಷಸೇಶ್ವರಪಾಲಿತಾಂ ಮಾಂ ಅನಿರ್ಜಿತ್ಯ, ಇಯಂ, ಪುರೀ, ಅದ್ಯ, ತೇ, ದ್ರಷ್ಟುಂ, ನಶಕ್ಯಂ ॥೩೬॥

ತತಃ, ಕಪಿಶಾರ್ದೂಲಃ, ಸಃ, ತಾಂ ನಿಶಾಚರೀಂ, ಉವಾಚ, ಹೇ ಭದ್ರೇ, ಇಮಾಂ ಪುರೀಂ ದೃಷ್ಟ್ವಾ, ಪುನಃ, ಯಥಾಗತಂ ಯಾಸ್ಯೇ ॥೩೭॥

ದುರ್ಬುದ್ಧೇ-ಬುದ್ಧಿಶೂನ್ಯನಾದ, ಹೇ ವಾನರಾಧಮ-ಎಲೈ ಕಪಿನೀಚನೇ, ರಾಕ್ಷಸೇಶ್ವರಪಾಲಿತಾಂ-ರಾವಣನಿಂದರಕ್ಷಿಸಲ್ಪಟ್ಟ, ಮಾಂ-ನನ್ನನ್ನು, ಅನಿರ್ಜಿತ್ಯ-ಜಯಿಸದೆ, ಇಯಂ ಪುರೀ-ಈ ಲಂಕಾಪಟ್ಟಣವು, ಅದ್ಯ-ಈಗ, ತೇ-ನಿನಗೆ, ದ್ರಷ್ಟುಂ-ನೋಡುವದಕ್ಕೆ, ನಶಕ್ಯಂ-ಸಾಧ್ಯವಲ್ಲ ॥೩೬॥

ತತಃ-ಅನಂತರದಲ್ಲಿ, ಕಪಿಶಾರ್ದೂಲಃ-ಕಪಿಶ್ರೇಷ್ಠನಾದ, ಸಃ-ಆ ಮಾರುತಿಯು, ತಾಂ ನಿಶಾಚರೀಂ-ಆ ರಾಕ್ಷಸಿಯನ್ನು ಕುರಿತು, ಉವಾಚ-ಹೇಳಿದ್ದೇನಂದರೆ; ಹೇ ಭದ್ರೇ-ಎಲೈ ಮಂಗಳಕರಳಾದವಳೇ, ಇಮಾಂಪುರೀಂ-ಈ ಪಟ್ಟಣವನ್ನು, ದೃಷ್ಟ್ವಾ-ನೋಡಿ, ಯಥಾಗತಂ-ನಾನು ಬಂದತೆರದಲ್ಲಿ, ಪುನಃ-ಮತ್ತು, ಯಾಸ್ಯೇ-ಪ್ರಯಾಣಮಾಡುತ್ತೇನೆ ॥೩೭॥

ಈ ಲಂಕಾನಗರದ ಸಂಬಂಧಗಳಾದ ವನೋಪವನಗಳನ್ನೂ ಅರಣ್ಯಾಂಕಣಗಳನ್ನೂ ಶ್ರೇಷ್ಠಗಳಾದ ಗೃಹಗಳನ್ನೂ ಎಲ್ಲಾಕಡೆಯಲ್ಲೂ ನೋಡಲೋಸ್ಕರ ನಾನು ಇಲ್ಲಿಗೆ ಬಂದಿರುತ್ತೇನೆ॥೩೪॥

ಕಾಮರೂಪಿಣಿಯಾದ ಆ ಲಂಕಿಣಿಯು, ಆ ಮಾರುತಿಯ ವಚನವನ್ನು ಕೇಳಿದ ಮಾತ್ರದಿಂದಲೇ ಅಸಹಿಷ್ಣುವಾಗಿ, ಕ್ರೂರಾಕ್ಷರ ಶಬ್ದಗಳಿಂದ ರಚಿತವಾಕ್ಯವನ್ನು ಪುನಃ, ಆ ಮಾರುತಿಯನ್ನು ಕುರಿತು ಹೇಳುವವಳಾದಳು॥೩೫॥

ಎಲೈ ಬುದ್ಧಿಹೀನನಾದ ಕಪಿನೀಚನೇ, ರಾಕ್ಷಸಾಧಿಪತಿಯಾದ ರಾವಣನಿಂದ ಸಂರಕ್ಷಿಸಲ್ಪಡುತ್ತಲಿರುವ ನನ್ನನ್ನು ನೀನು ಜಯಿಸದೆ ಈ ದಿವಸ ಈ ಲಂಕಾ ಪಟ್ಟಣವನ್ನು ನೋಡುವದು ಎಂದಿಗೂ ಸುಖಕರವಲ್ಲ॥೩೬॥

ಅನಂತರದಲ್ಲಿ ಕಪಿಪ್ರವರನಾದ ಆ ಮಾರುತಿಯು ಆ ರಾಕ್ಷಸಿಯಾದ ಲಂಕಿಣಿಯನ್ನು ಕುರಿತು ಈ ರೀತಿಯಲ್ಲಿ ಸಮಾಧಾನೋಕ್ತಿಗಳನ್ನು ಹೇಳುವನಾದನು. ಅದೇ

ಮೂ। ತತಃ ಕೃತ್ವಾಮಹಾನಾದಂ ಸಾವೈ ಲಂಕಾಭಯಾವಹಮ್।
ತಲೇನ ವಾನರಶ್ರೇಷ್ಠಂ ತಾಡಯಾಮಾಸವೇಗಿತಾ॥೩೪॥
ತತಸ್ಸ ಕಪಿಶಾರ್ದೂಲೋ ಲಂಕಯಾತಾಡಿತೋಭೃಶಂ।
ನನಾದಸು ಮಹಾನಾದಂ ವೀರ್ಯವಾನ್ ಪವನಾತ್ಮಜಃ॥೩೯॥

**ಪದಚ್ಛೇದ**

ತತಃ, ಕೃತ್ವಾ, ಮಹಾನಾದಂ, ಸಾ, ವೈ, ಲಂಕಾ, ಭಯಾವಹಂ, ತಲೇನ, ವಾನರಶ್ರೇಷ್ಠಂ, ತಾಡಯಾಮಾಸ ವೇಗಿತಾ ॥೩೪॥

ತತಃ, ಕಪಿಶಾರ್ದೂಲಃ, ಲಂಕಯಾ, ತಾಡಿತಃ ಭೃಶಂ, ನನಾದ, ಸುಮಹಾನಾದಂ. ವೀರ್ಯವಾನ್, ಪವನಾತ್ಮಜಃ ॥೩೯॥

**ಅನ್ವಯ**

ತತಃ ಸಾ ಲಂಕಾ ಭಯಾವಹಮ್, ಮಹಾನಾದಂ ಕೃತ್ವಾ, ವೇಗಿತಾ ಸತೀ ತಲೇನ ವಾನರಶ್ರೇಷ್ಠಂ ತಾಡಯಾಮಾಸ ॥೩೪॥

ತತಃ ಕಪಿಶಾರ್ದೂಲಃ ವೀರ್ಯವಾನ್, ಸಃ ಪವನಾತ್ಮಜಃ, ಲಂಕಯಾ, ಭೃಶಂ ತಾಡಿತಃ, ಸುಮಹಾನಾದಂ ನನಾದ ॥೩೯॥

ತತಃ-ಅನಂತರದಲ್ಲಿ, ಸಾ ಲಂಕಾ-ಆ ಲಂಕಾಭಿಮಾನಿನಿಯಾದದೇವತೆಯು, ಭಯಾವಹಂ-ಭಯಂಕರವಾದ, ಮಹಾನಾದಂ-ಮಹಾಧ್ವನಿಯನ್ನು, ಕೃತ್ವಾ-ಮಾಡಿ, ವೇಗಿತಾಸತೀ-ವೇಗವುಳ್ಳವಳಾಗಿ, ತಲೇನ-ಹಸ್ತತಲದಿಂದ, ವಾನರಶ್ರೇಷ್ಠಂ-ಹನುಮಂತನನ್ನು, ತಾಡಯಾಮಾಸ-ಹೊಡೆದಳು ॥೩೪॥

ತತಃ-ಅನಂತರದಲ್ಲಿ, ಕಪಿಶಾರ್ದೂಲಃ-ಕಪಿಶ್ರೇಷ್ಠನಾದ, ವೀರ್ಯವಾನ್-ತೇಜಸ್ವಿಯಾದ, ಸಃ ಪವನಾತ್ಮಜಃ-ಆ ವಾಯುಪುತ್ರನಾದ ಮಾರುತಿಯು, ಲಂಕಯಾ-ಲಂಕಾಭಿಮಾನಿಯಾದದೇವತೆಯಿಂದ, ಭೃಶಂ-ಅತ್ಯಂತವಾಗಿ, ತಾಡಿತಃ-ಪ್ರಹರಿಸಲ್ಪಟ್ಟವನಾಗಿ, ಸುಮಹಾನಾದಂ-ದೊಡ್ಡಧ್ವನಿಯಿಂದಕೂಡಿಕೊಂಡಿರೋಣ ಹೇಗೋ ಹಾಗೆ, ನನಾದ-ಧ್ವನಿಗೈದನು ॥೩೯॥

ನಂದರೆ:- ಎಲೈ ಕಲ್ಯಾಣಿಯೇ! ನಾನು ಈ ಲಂಕಾನಗರಿಯನ್ನು ದರ್ಶನಮಾಡಿಕೊಂಡು ಪುನಃ ನಾನು ಬಂದದಾರಿಯಲ್ಲಿ ತೆರಳುವನಾಗುವೆನು॥೩೩॥

ಈ ಪ್ರಕಾರವಾದ ಮಾತನ್ನುಕೇಳಿ ಆ ಲಂಕಾಭಿಮಾನಿ ದೇವತೆಯು, ಅತಿ ಭಯಂಕರವಾದ ಮಹಾ ಧ್ವನಿಯನ್ನು ಮಾಡಿದವಳಾಗಿ, ಅತ್ಯಂತ ವೇಗದಿಂದ, ಹಸ್ತತಲದಿಂದ ಆ ಮಾರುತಿಯನ್ನು ಹೊಡೆಯುವಳಾದಳು॥೩೪॥

ಅನಂತರದಲ್ಲಿ ಮಹಾ ತೇಜಸ್ವಿಯಾದ ಕಪಿಕುಲಾಗ್ರಣಿಯಾದ ಜಗತ್ಪ್ರಾಣಪುತ್ರನಾದ ಆ ಮಾರುತಿಯು, ಆ ಘೋರ ಲಂಕಿಣಿಯಿಂದ ಘಟ್ಟಿಯಾಗಿ ಹೊಡೆಯಲ್ಪಟ್ಟವನಾಗಿ, ಬಹಳ ದೊಡ್ಡದಾದ ಶಬ್ದವನ್ನು ಮಾಡುವನಾದನು॥೩೯॥

ಮೂ॥ ತತಸ್ಸಂವರ್ತಯಾಮಾಸ ವಾಮಹಸ್ತಸ್ಯ ಸೋಂಗುಲೀಃ ।
ಮುಷ್ಟಿನಾಭಿ ಜಘಾನೈನಾಂ ಹನುಮಾನ್ಕ್ರೋಧ ಮೂರ್ಛಿತಃ ॥೪೦॥
ಸ್ತ್ರೀ ಚೇತಿ ಮನ್ಯಮಾನೇನ ನಾತಿಕ್ರೋಧಸ್ಸ್ವಯಂಕೃತಃ ॥೪೧॥ *
॥ ಸಾತುತೇನ ಪ್ರಹಾರೇಣ ವಿಹ್ವಲಾಂಗೀನಿಶಾಚರೀ।
ಪಪಾತ ಸಹಸಾಭೂಮೌವಿಕೃತಾನನದರ್ಶನಾ ॥೪೨॥

| ಪದಚ್ಛೇದ | ಅನ್ವಯ |
|---|---|
| ತತಃ, ಸಂವರ್ತಯಾಮಾಸ, ವಾಮಹಸ್ತಸ್ಯ, ಸಃ, ಅಂಗಲೀಃ, ಮುಷ್ಟಿನಾ, ಅಭಿಜಘಾನ, ಏನಾಂ, ಹನುಮಾನ್, ಕ್ರೋಧಮೂರ್ಛಿತಃ ॥೪೦॥ | ತತಃ ಕ್ರೋಧಮೂರ್ಛಿತಃ ಸಃ ಹನುಮಾನ್, ವಾಮಹಸ್ತಸ್ಯ, ಅಂಗುಲೀಃ, ಸಂವರ್ತಯಾಮಾಸ, ಚ ಏನಾಂ, ಮುಷ್ಟಿನಾ, ಅಭಿಜಘಾನ ॥೪೦॥ |
| ಸ್ತ್ರೀ, ಚ, ಇತಿ, ಮನ್ಯಮಾನೇನ, ನ, ಅತಿಕ್ರೋಧಃ, ಸ್ವಯಂ, ಕೃತಃ ॥೪೧॥ | ಸ್ತ್ರೀ ಇತಿ ಮನ್ಯಮಾನೇನ, (ಮಾರುತಿನಾ) ಸ್ವಯಂ, ಅತಿಕ್ರೋಧಃ, ನಕೃತಃ ॥೪೧॥ |
| ಸಾ, ತು, ತೇನ, ಪ್ರಹಾರೇಣ, ವಿಹ್ವಲಾಂಗೀ, ನಿಶಾಚರೀ, ಪಪಾತ, ಸಹಸಾ, ಭೂಮೌ, ವಿಕೃತಾನನದರ್ಶನಾ ॥೪೨॥ | ತೇನ, ಪ್ರಹಾರೇಣ, ವಿಹ್ವಲಾಂಗೀ, ಸಾ, ನಿಶಾಚರೀತು, ವಿಕೃತಾನನ ದರ್ಶನಾ ಸತೀ, ಸಹಸಾ, ಭೂಮೌ, ಪಪಾತ ॥೪೨॥ |

ತತಃ-ಅನಂತರದಲ್ಲಿ, ಕ್ರೋಧಮೂರ್ಛಿತಃ-ಕ್ರೋಧದಿಂದ ವ್ಯಾಪ್ತನಾದವನಾಗಿ, ಸಃ ಹನುಮಾನ್-ಆ ಮಾರುತಿಯು, ವಾಮಹಸ್ತಸ್ಯ-ಎಡಗೈಯಿನ, ಅಂಗುಲೀಃ-ಬೆರಳುಗಳನ್ನು, ಸಂವರ್ತಯಾಮಾಸ-ಮುಗಚುವನಾದನು, ಚ-ಮತ್ತು, ಏನಾಂ-ಈ ಲಂಕಿನಿಯನ್ನು, ಮುಷ್ಟಿನಾ-ಮುಷ್ಟಿಯಿಂದ, ಅಭಿಜಘಾನ-ಹೊಡೆಯುವನಾದನು ॥೪೦॥

ಸ್ತ್ರೀ ಇತಿ ಮನ್ಯಮಾನೇನ-ಹೆಂಗಸು ಎಂಬದಾಗಿ ತಿಳಿದವನಾದ, ಮಾರುತಿನಾ-ಆಂಜನೇಯನಿಂದ, ಸ್ವಯಂ-ತನ್ನಿಂದ, ಅತಿಕ್ರೋಧಃ-ಅತ್ಯಂತವಾದಕೋಪವು, ನಕೃತಃ-ಮಾಡಲ್ಪಡಲಿಲ್ಲ ॥೪೧॥

ತೇನಪ್ರಹಾರೇಣ-ಆ ಏಟನಿಂದ, ವಿಹ್ವಲಾಂಗೀ-ಕಳವಳಗೊಂಡಶರೀರವುಳ್ಳ, ಸಾ ನಿಶಾಚರೀತು-ಆ ರಾಕ್ಷಸಿಯಾದಲಂಕಿನಿಯಾದರೋ, ವಿಕೃತಾನನದರ್ಶನಾ ಸತೀ-ವಿಕಾರವನ್ನು ಹೊಂದಿದ ಮುಖವು ನೋಟವೂ ಉಳ್ಳವಳಾಗಿ, ಭೂಮೌ-ಭೂಮಿಯಲ್ಲಿ, ಸಹಸಾ-ವೇಗದಿಂದ, ಪಪಾತ-ಬೀಳುವಳಾದಳು

ಈ ಪ್ರಕಾರವಾಗಿ ಆ ಮಾರುತಿಯು ಅತ್ಯಂತ ಕೋಪಗೊಂಡವನಾಗಿ, ತನ್ನ ಎಡಗೈಯಿನ ಬೆರಳುಗಳನ್ನು ಮುಗುಚಿ ಈ ಲಂಕಿಣಿಯನ್ನು ಮುಷ್ಟಿಯಿಂದ ಪ್ರಹರಿಸುವನಾದನು॥೪೦॥

ಈಕೆಯು ಹೆಂಗಸು ಈಕೆಯಮೇಲೆ ನಾನು ಹೆಚ್ಚಾದ ಕೋಪವನ್ನು ತೋರಿಸಬಾರದೆಂಬ ಕನಿಕರದಿಂದ ಆ ಮಾರುತಿಯು ಅತಿಶಯವಾದ ಕೋಪವನ್ನು ಮಾಡದೆ ಸ್ವಲ್ಪಮೃದುವಾದ ಏಟನ್ನು ಆ ಲಂಕಿಣಿಗೆ ಪ್ರಯೋಗಿಸುವನಾದನು॥೪೧॥

* ಅರ್ಧಶ್ಲೋಕವನ್ನೇ ಒಂದುಪೂರ್ಣ ಶ್ಲೋಕವಾಗಿ ಛಾಪಿಸಿರುತ್ತಾರೆ.

ಮೂ || ತತಸ್ತು ಹನುಮಾನ್ ಪ್ರಾಜ್ಞಸ್ತಾಂ ದೃಷ್ಟ್ವಾ ವಿನಿಪಾತಿತಾಂ ।
ಕೃಪಾಂಚಕಾರತೇಜಸ್ವೀ ಮನ್ಯಮಾನಃಸ್ತ್ರಿಯಂತುತಾಂ ||೪೩||
ತತೋವೈ ಭೃಶಸಂವಿಗ್ನಾ ಲಂಕಾಸಾಗದ್ಗದಾಕ್ಷರಂ ।
ಉವಾಚ ಗರ್ವಿತಂ ವಾಕ್ಯಂ ಹನುಮಂತಂ ಪ್ಲವಂಗಮಂ||೪೪||

| ಪದಚ್ಛೇದ | ಅನ್ವಯ |
| --- | --- |
| ತತಃ, ತು, ಹನುಮಾನ್, ಪ್ರಾಜ್ಞಃ, ತಾಂ, ದೃಷ್ಟ್ವಾ, ವಿನಿಪಾತಿತಾಂ, ಕೃಪಾಂ, ಚಕಾರ, ತೇಜಸ್ವೀ, ಮನ್ಯಮಾನಃ, ಸ್ತ್ರಿಯಂ, ತು, ತಾಂ | ತತಃ ತೇಜಸ್ವೀ ಪ್ರಾಜ್ಞಃ ಹನುಮಾನ್, ವಿನಿಪಾತಿತಾಂ; ತಾಂ ದೃಷ್ಟ್ವಾ ತಾಂ ಸ್ತ್ರಿಯಂ ಮನ್ಯಮಾನಃ, ಕೃಪಾಂ ಚಕಾರ ||೪೩|| |
| ತತಃ, ವೈ, ಭೃಶಸಂವಿಗ್ನಾ, ಲಂಕಾ, ಸಾ, ಗದ್ಗದಾಕ್ಷರಂ, ಉವಾಚ, ಗರ್ವಿತಂ, ವಾಕ್ಯಂ, ಹನುಮಂತಂ, ಪ್ಲವಂಗಮಂ ||೪೪|| | ತತಃ ಭೃಶಸಂವಿಗ್ನಾ, ಸಾ, ಲಂಕಾ, ಪ್ಲವಂಗಮಂ, ಹನುಮಂತಮಂ, ಗದ್ಗದಾಕ್ಷರಂ ಯಥಾ ತಥಾ, ಗರ್ವಿತಂ ವಾಕ್ಯಂ, ಉವಾಚ ||೪೪|| |

ತತಃ-ಅನಂತರದಲ್ಲಿ, ಪ್ರಾಜ್ಞಃ-ಪ್ರವೀಣನಾದ, ಹನುಮಾನ್-ಮಾರುತಿಯು, ವಿನಿಪಾತಿತಾಂ-ಕೆಳಕ್ಕೆ ಬೀಳಿಸಲ್ಪಟ್ಟ, ತಾಂ-ಆ ಲಂಕಿನಿಯನ್ನು, ದೃಷ್ಟ್ವಾ-ನೋಡಿ, ತಾಂಸ್ತ್ರಿಯಂ ಮನ್ಯಮಾನಃ-ಅವಳನ್ನು ಹೆಂಗಸೆಂದು ತಿಳಿದವನಾಗಿ, ಕೃಪಾಂ-ಕಾರುಣ್ಯವನ್ನು, ಚಕಾರ-ಮಾಡಿದನು ||೪೩||

ತತಃ-ಅನಂತರದಲ್ಲಿ, ಭೃಶಸಂವಿಗ್ನಾ- ಅತ್ಯಂತಕ್ಷೋಭೆಯನ್ನು ಹೊಂದಿದಂಥಾ, ಸಾ ಲಂಕಾ-ಆ ಲಂಕೆಯು, ಪ್ಲವಂಗಮಂ ಹನುಮಂತಂ-ಕಪಿಯಾದಮಾರುತಿಯನ್ನು ಕುರಿತು, ಗದ್ಗದಾಕ್ಷರಂ ಯಥಾ ತಥಾ-ಗದ್ಗದಧ್ವನಿಯುಕ್ತವಾದ ಶಬ್ದಗಳೊಡನೆಕೂಡಿರೋಣ ಹೆಗೊ ಹಾಗೆ, ಗರ್ವಿತಂ-ಅಹಂಕಾರಯುಕ್ತವಾದ, ವಾಕ್ಯಂ-ವಚನವನ್ನು, ಉವಾಚ-ಹೇಳುವವಳಾದಳು ||೪೪||

ಈ ಪ್ರಕಾರ ಆ ಮಾರುತಿಯು ಮಾಡಿದ ಮುಷ್ಟಿಪ್ರಹಾರದಿಂದ ಮೂರ್ಛಿತ ಶರೀರಳಾಗಿ ಆ ಲಂಕಿಣಿಯು ವಿಕಾರವಾದ ಮುಖದಿಂದಲೂ, ಕರಾಳವಾದ ನೋಟದಿಂದಲೂ ಕೂಡಿದವಳಾಗಿ, ತಟ್ಟನೆ ಭೂಮಿಯಲ್ಲಿ ಬಿದ್ದಳು||೪೨||

ಪ್ರಜ್ಞಾ ಶಾಲಿಯಾದ ಆ ಮಾರುತಿಯು, ಈ ರೀತಿಯಲ್ಲಿ ತನ್ನ ಮುಷ್ಟಿ ಪ್ರಹಾರದಿಂದ ಭೂಮಿಯಲ್ಲಿ ಬಿದ್ದಿರತಕ್ಕ ಆ ಲಂಕಿನಿಯನ್ನು ನೋಡಿದವನಾಗಿ, ಆ ವ್ಯಕ್ತಿಯು ಹೆಂಗಸೆಂದು ತಿಳಿದ ಮಾತ್ರದಿಂದಲೇ ಕಾರುಣ್ಯ ಪೂರ್ಣವಾದ ಅಂತಃಕರಣವುಳ್ಳವನಾದನು||೪೩||

ಬಹಳವಾಗಿ ಮುಷ್ಟಿಪ್ರಹಾರವೇದನೆಯಿಂದ ಕ್ಷೋಭೆಯನ್ನು ಹೊಂದಿದ ಆ ಲಂಕಿನಿಯು ಮಾರುತಿಯನ್ನು ಕುರಿತು ಗದ್ಗದ ಧ್ವನಿಯುಕ್ತವಾದ ವಚನವನ್ನು ಗರ್ವಿತಳಾಗಿ ಈ ರೀತಿಯಲ್ಲಿ ಹೇಳುವವಳಾದಳು||೪೪||

ಪ್ರಸೀದಸು ಮಹಾ ಬಾಹೋತ್ರಾಯಸ್ವ ಹರಿಸತ್ತಮ ।
ಸಮಯೆ ಸೌಮ್ಯ, ತಿಷ್ಠಂತೀಸತ್ವವಂತೋ ಮಹಾಬಲಾಃ ॥೪೫॥
ಅಹಂತು ನಗರೀಲಂಕಾ ಸ್ವಯಮೇವ ಪ್ಲವಂಗಮ ।
ನಿರ್ಜಿತಾಹಂ ತ್ವಯಾವೀರಾ ವಿಕ್ರಮೇಣ ಮಹಾಬಲ ॥೪೬॥
ಇದಂತು ತಥ್ಯಂ ಶೃಣುವೈಬ್ರುವಂತ್ಯಾಮೆ ಹರೀಶ್ವರ, ।
ಸ್ವಯಂ ಭುವಾಪುರಾದತ್ತಂ ವರದಾನಂ ಯಥಾಮಮ ॥೪೭॥

| ಪದಚ್ಛೇದ | ಅನ್ವಯ |
|---|---|
| ಪ್ರಸೀದ, ಸುಮಹಾಬಾಹೊ, ತ್ರಾಯಸ್ವ, ಹರಿಸತ್ತಮ, ಸಮಯೆ, ಸೌಮ್ಯ, ತಿಷ್ಠಂತಿ, ಸತ್ವವಂತಃ, ಮಹಾಬಲಾಃ ॥೪೫॥ | ಸುಮಹಾಬಾಹೊ ಹರಿಸತ್ತಮ ಪ್ರಸೀದ, ತ್ರಾಯಸ್ವ, ಹೆ ಸೌಮ್ಯ, ಸತ್ವವಂತಃ ಮಹಾಬಲಾಃ ಸಮಯೆ ತಿಷ್ಠಂತಿ ॥೪೫॥ |
| ಅಹಂ, ತು, ನಗರೀ, ಲಂಕಾ, ಸ್ವಯಂ, ಏವ, ಪ್ಲವಂಗಮ, ನಿರ್ಜಿತಾ, ಅಹಂ, ತ್ವಯಾ, ವೀರ, ವಿಕ್ರಮೇಣ, ಮಹಾಬಲ ॥೪೬॥ | ಹೆ ಪ್ಲವಂಗಮ, ಅಹಂತು, ಸ್ವಯಂ ಲಂಕಾನಗರೀ, ಹೆವೀರ ಮಹಾಬಲ, ಅಹಂ ತ್ವಯಾ, ವಿಕ್ರಮೇಣ, ನಿರ್ಜಿತಾ ॥೪೬॥ |
| ಇದಂ, ತು, ತಥ್ಯಂ, ಶೃಣು, ವೈ, ಬ್ರುವಂತ್ಯಾಃ, ಮೆ, ಹರೀಶ್ವರ, ಸ್ವಯಂ ಭುವಾ, ಪುರಾ, ದತ್ತಂ, ವರದಾನಂ, ಯಥಾ, ಮಮ ॥೪೭॥ | ಹೆ ಹರೀಶ್ವರ, ಪುರಾ, ಸ್ವಯಂಭುವಾ, ವರದಾನಂ ಯಥಾ ಮಮ ದತ್ತಂ, ಇದಂ ತಥ್ಯಂ ಬ್ರುವಂತ್ಯಾಃ, ಮೆ, ಶೃಣು ॥೪೭॥ |

ಸುಮಹಾಬಾಹೊ-ಎಲೈ ಶೋಭನಭುಜವುಳ್ಳ, ಹರಿಸತ್ತಮ-ಕಪಿಶ್ರೇಷ್ಠನೇ, ಪ್ರಸೀದ-ಪ್ರಸನ್ನನಾಗು, ತ್ರಾಯಸ್ವ-ರಕ್ಷಣೆಮಾಡು, ಹೆ ಸೌಮ್ಯ-ಎಲೈ ಶಾಂತಸ್ವಭಾವನೇ, ಸತ್ವವಂತಃ,ಸತ್ವಗುಣಪ್ರಧಾನರಾದ, ಮಹಾಬಲಾಃ-ಮಹಾಶಕ್ತಿವಂತರಾದ ಜನರು, ಸಮಯೆ-ಹದ್ದುಬಸ್ತಿನಲ್ಲಿ, ತಿಷ್ಠಂತಿ-ಇರುತ್ತಾರೆ ॥೪೫॥

ಹೆ ಪ್ಲವಂಗಮ-ಹೇ ಕಪಿವರ್ಯನೇ, ಅಹಂತು-ನಾನಾದರೊ, ಸ್ವಯಂ ಸಾಕ್ಷಾತ್ತಾದ, ಲಂಕಾನಗರೀ-ಲಂಕಾಪಟ್ಟಣವು, ಹೇವೀರ-ಎಲೈ ಶೂರನೇ, ಮಹಾಬಲ ಅತಿಶಯವಾದ ಶಕ್ತಿಯುಳ್ಳವನೇ ಅಹಂ-ನಾನು, ತ್ವಯಾ-ನಿನ್ನಿಂದ, ವಿಕ್ರಮೇಣ-ಪರಾಕ್ರಮದಿಂದ, ನಿರ್ಜಿತಾ-ಜಯಿಸಲ್ಪಟ್ಟವಳಾಗಿದ್ದೇನೆ ॥೪೬॥

ಹೇ ಹರೀಶ್ವರ-ಎಲೈಕಪಿಪ್ರವರನೇ; ಪುರಾ-ಪೂರ್ವದಲ್ಲಿ, ಸ್ವಯಂಭುವಾ-ಬ್ರಂಹ್ಮನಿಂದ, ವರದಾನಂ-ವರಪ್ರದಾನವು,ಯಥಾ-ಯಾವರೀತಿಯಲ್ಲಿ, ಮಮ-ನನಗೆ, ದತ್ತಂ-ಕೊಡಲ್ಪಟ್ಟಿತೊ, ಇದಂ ತಥ್ಯಂ-ಈ ಸತ್ಯವಾದಸಂಗತಿಯನ್ನು, ಬ್ರುವಂತ್ಯಾಃ-ಹೇಳುತಲಿರುವ, ಮೆ-ನನ್ನ,(ವಚನಂ-ವಾಕ್ಯವನ್ನು) ಶೃಣು-ಕೇಳುವನಾಗು ॥೪೭॥

ಎಲೈ ದೀರ್ಘಬಾಹುವಾದ ವಾನರೋತ್ತಮನೇ, ನನ್ನ ವಿಷಯದಲ್ಲಿ, ಪ್ರಸನ್ನನಾಗು, ನನ್ನನ್ನು ಕಾಪಾಡುವನಾಗು; ನೀನು ಶಾಂತಸ್ವಭಾವನು, ಲೋಕದಲ್ಲಿ ಸಾತ್ವಿಕರಾದ ಶಕ್ತಿವಂತರು ತಮ್ಮಶಕ್ತಿಯನ್ನು ಪ್ರಯೋಗಿಸಬೇಕಾದರೆ ಯಾರಮೇಲೆ ಪ್ರಯೋಗಿಸು

ಮೂ ॥ ಯದಾತ್ವಾಂ ವಾನರಃ ಕಶ್ಚಿದ್ವಿಕ್ರಮಾದ್ವಶಮಾನಯೇತ್।
ತದಾತ್ವಯಾಹಿ ವಿಜ್ಞೇಯಂ ರಕ್ಷಸಾಂಭಯಮಾಗತಮ್॥೪೭॥
ಸಹಿಮೇ ಸಮಯಸ್ಸೌಮ್ಯ ಪ್ರಾಪ್ತೋದ್ಯತವ ದರ್ಶನಾತ್।
ಸ್ವಯಂಭೂ ವಿಹಿತಸ್ಸತ್ಯೋ ನತಸ್ಯಾಸ್ತಿ ವ್ಯತಿಕ್ರಮಃ ॥೪೮॥

| ಪದಚ್ಛೇದ | ಅನ್ವಯ |
|---|---|
| ಯದಾ, ತ್ವಾಂ, ವಾನರಃ, ಕಃಚಿತ್, ವಿಕ್ರಮಾತ್, ವಶಂ, ಆನಯೇತ್, ತದಾ, ತ್ವಯಾ, ಹಿ, ವಿಜ್ಞೇಯಂ, ರಕ್ಷಸಾಂ, ಭಯಂ, ಆಗತಮ್ಃ | ಯದಾ ತ್ವಾಂ ಕಶ್ಚಿದ್ವಾನರಃ ವಿಕ್ರಮಾತ್ ವಶಂ ಆನಯೇತ್, ತದಾ ತ್ವಯಾ ರಕ್ಷಸಾಂಭಯಂ ಆಗತಂ ವಿಜ್ಞೇಯಂ ॥೪೭॥ |
| ಸಃ, ಹಿ, ಮೇ, ಸಮಯಃ, ಸೌಮ್ಯ, ಪ್ರಾಪ್ತಃ ಅದ್ಯ, ತವ, ದರ್ಶನಾತ್, ಸ್ವಯಂಭೂವಿಹಿತಃ, ಸತ್ಯಃ, ನ, ತಸ್ಯ, ಅಸ್ತಿ, ವ್ಯತಿಕ್ರಮಃ ॥೪೮॥ | ಹೆ ಸೌಮ್ಯ ತವ ದರ್ಶನಾತ್, ಸ್ವಯಂಭೂ ವಿಹಿತಃ ಸತ್ಯಃ, ಸಃ ಸಮಯೋಹಿ, ಮೇ, ಅದ್ಯ ಪ್ರಾಪ್ತಃ, ತಸ್ಯ ವ್ಯತಿಕ್ರಮಃ ನಾಸ್ತಿ ॥೪೮॥ |

ಯದಾ-ಯಾವಾಗ, ಕಶ್ಚಿದ್ವಾನರಃ-ಒಬ್ಬಾನೊಬ್ಬಕಪಿಯು, ವಿಕ್ರಮಾತ್-ತನ್ನಪರಾಕ್ರಮದಿಂದ, ವಶಂ-ಸ್ವಾಧೀನತೆಯನ್ನು, ಆನಯೇತ್-ಹೊಂದಿಸುತ್ತಾನೆಯೊ, ತದಾ-ಆವಾಗ, ರಕ್ಷಸಾಂ-ರಾಕ್ಷಸರಿಗೆ, ಭಯಂ-ಅಪಾಯವು, ಆಗತಂ-ಬಂದದ್ದನ್ನಾಗಿ, ತ್ವಯಾ-ನಿನ್ನಿಂದಾ, ವಿಜ್ಞೇಯಂ-ತಿಳಿಯಲ್ಪಡತಕ್ಕದ್ದು

ಹೆ ಸೌಮ್ಯ-ಎಲೈ ಶಾಂತಸ್ವಭಾವನೇ, ತವ ದರ್ಶನಾತ್, ನಿನ್ನನ್ನು ನೋಡೋಣದರಿಂದ, ಸ್ವಯಂಭೂವಿಹಿತಃ-ಬ್ರಹ್ಮನಿಂದಕ್ಲಿಪ್ತನಾದ, ಸತ್ಯಃ-ಯಥಾರ್ಥವಾದ, ಸಃ ಸಮಯೋಹಿ ಆ ಸಮಯವಾದರೊ, ಮೇ-ನನಗೆ, ಅದ್ಯ-ಈ ದಿವಸ, ಪ್ರಾಪ್ತಃ-ಒದಗಿರುತ್ತದೆ, ತಸ್ಯ-ಆ ಬ್ರಹ್ಮಕ್ಲಿಪ್ತಿಗೆ, ವ್ಯತಿಕ್ರಮಃ -ವ್ಯತ್ಯಾಸವು, ನಾಸ್ತಿ-ಇಲ್ಲವು ॥೪೮॥

ತ್ತಾರೆಯೋ ಆ ಸ್ತ್ರೀಪುರುಷವ್ಯಕ್ತಿವಿಶೇಷಗಳನ್ನು ಪರಾಂಬರಿಸಿ ಕಟ್ಟಲೆಯನ್ನುಮೀರ ದೆನಡದುಕೊಳ್ಳುತ್ತಾರೆ॥೪೫॥

ಎಲೈ ವಾನರೋತ್ತಮನೇ, ಕಪಿಕುಲಾಗ್ರಣಿಯೇ! ನಾನುಸಾಕ್ಷಾತ್ತಾದ ಲಂಕಾಪತ್ತನವು, ಎಲೈ ಅತಿಶಯವಾದ ಶಕ್ತಿಯುಳ್ಳ ಮಹಾ ಪರಾಕ್ರಮಿಯೆ, ನಾನು ನಿನ್ನ ವೀರ್ಯಾತಿಶಯದಿಂದ ಪರಾಜಿತಳಾಗಿದೇನೆ॥೪೬॥

ಎಲೈ ಕಪೀಶ್ವರನೇ, ಪೂರ್ವದಲ್ಲಿ ಬ್ರಹ್ಮನು ನನಗೆಯಾವರೀತಿಯಲ್ಲಿ ವರದಾನ ಮಾಡಿದನೋ ಅದರ ವಾಸ್ತವಸ್ಥಿತಿಯನ್ನು ನಿನಗೆ ಅರುಹುತ್ತೇನೆ ಕೇಳುವನಾಗು॥೪೭॥

ಎಲೈ ಲಂಕಾಧಿ ದೇವತೆಯೆ, ಯಾವಾಗ ನಿನ್ನನ್ನು ಒಬ್ಬಾನೊಬ್ಬ ಕಪಿಯು ಶೌರ್ಯದಿಂದ ಆಕ್ರಮಿಸಿ ಸ್ವಾಧೀನ ಪಡಿಸಿಕೊಳ್ಳುತ್ತಾನೆಯೋ ಆ ಕಾಲದಲ್ಲಿ ಲಂಕಾವಾಸಿಗಳಾದ ರಾಕ್ಷಸರಿಗೆಲ್ಲಾ ಭಯವು ಪ್ರಾಪ್ತವಾಯಿತು ಎಂದು ತಿಳಿಯುವಳಾಗು ಎಂದು ಬ್ರಹ್ಮನು ನನಗೆ ಹೇಳಿದನು ॥೪೭॥

ಮೂ ॥ ಸೀತಾನಿಮಿತ್ತಂ ರಾಜ್ಞಸ್ತು ರಾವಣಸ್ಯದುರಾತ್ಮನಃ।
ರಕ್ಷಸಾಂ ಚೈವಸರ್ವೇಷಾಂ ವಿನಾಶಸ್ಸಮುಪಾಗತಃ॥೫೦॥
ತತ್ಪ್ರವಿಶ್ಯ ಹರಿಶ್ರೇಷ್ಠಪುರೀಂ ರಾವಣಪಾಲಿತಾಂ ।
ವಿಧತ್ಸ್ವ ಸರ್ವಕಾರ್ಯಾಣಿಯಾನಿ ಯಾನೀಹವಾಂಛಸಿ ॥೫೧॥

**ಪದಚ್ಛೇದ**

ಸೀತಾನಿಮಿತ್ತಂ, ರಾಜ್ಞಃ, ತು, ರಾವಣಸ್ಯ, ದುರಾತ್ಮನಃ, ರಕ್ಷಸಾಂ, ಚ, ಏವ, ಸರ್ವೇಷಾಂ, ವಿನಾಶಃ, ಸಮುಪಾಗತಃ ॥೫೦॥

ತತ್, ಪ್ರವಿಶ್ಯ, ಹರಿಶ್ರೇಷ್ಠ, ಪುರೀಂ, ರಾವಣ ಪಾಲಿತಾಂ, ವಿಧತ್ಸ್ವ, ಸರ್ವಕಾರ್ಯಾಣಿ, ಯಾನಿ ಯಾನಿ, ಇಹ, ವಾಂಛಸಿ ॥೫೧॥

**ಅನ್ವಯ**

ಸೀತಾನಿಮಿತ್ತಂ, ದುರಾತ್ಮನಃ ರಾಜ್ಞಃ, ರಾವಣಸ್ಯ, ಸರ್ವೇಷಾಂ, ರಕ್ಷಸಾಂಚ, ವಿನಾಶಃ, ಸಮುಪಾಗತಃ ॥೫೦॥

ಹೆ ಹರಿಶ್ರೇಷ್ಠ, ರಾವಣಪಾಲಿತಾಂ ಪುರೀಂ ಪ್ರವಿಶ್ಯ, ಇಹ, ಯಾನಿ ಯಾನಿ ವಾಂಛಸಿ, ತಾನಿ, ಸರ್ವಕಾರ್ಯಾಣಿ ವಿಧತ್ಸ್ವ ॥೫೧॥

ಸೀತಾನಿಮಿತ್ತಂ-ಸೀತೆಯಕಾರಣದಿಂದ, ದುರಾತ್ಮನಃ-ದುಷ್ಟಚಿತ್ತನಾದ, ರಾಜ್ಞಃ-ರಾಜನಾದ ರಾವಣಸ್ಯ-ರಾವನಿಗೂ, ಸರ್ವೇಷಾಂ-ಸಮಸ್ತರಾದ, ರಕ್ಷಸಾಂಚ-ರಾಕ್ಷಸರಿಗೂ ಕೂಡ, ವಿನಾಶಃ-ನಾಶವು, ಸಮುಪಾಗತಃ- ಪ್ರಾಪ್ತವಾಗಿರುತ್ತದೆ ॥೫೦॥

ಹೆ ಹರಿಶ್ರೇಷ್ಠ-ಎಲೈಕಪಿಸಲ್ತೋತ್ತಮನೇ! ರಾವಣಪಾಲಿತಾಂ-ರಾವಣನಿಂದರಕ್ಷಿಸಲ್ಪಟ್ಟ, ಪುರೀಂ-ಪಟ್ಟಣವನ್ನು, ಪ್ರವಿಶ್ಯ-ಪ್ರವೇಶವಮಾಡಿ, ಇಹ-ಇಲ್ಲಿ, ಯಾನಿ ಯಾನಿ-ಯಾವ ಯಾವಕಾರ್ಯಗಳನ್ನು, ವಾಂಛಸಿ-ಅಪೇಕ್ಷಿಸುತ್ತೀಯೊ, ತಾನಿ ಸರ್ವಕಾರ್ಯಾಣಿ-ಆ ಸಮುಸ್ತಕೆಲಸಗಳನ್ನು, ವಿಧತ್ಸ್ವ-ಮಾಡಿಕೊಳ್ಳುವನಾಗು ॥೫೧॥

ಎಲೈ ಶಾಂತಮೂರ್ತಿಯಾದ ವಾನರನೇ! ನಿನ್ನ ದರ್ಶನದ ಮಹಿಮೆಯಿಂದ, ಬ್ರಹ್ಮನಿಂದ ಮೊದಲೇ ಗೊತ್ತುಮಾಡಲ್ಪಟ್ಟದ್ದ ಆ ಸಮಯವು ಈ ದಿವಸ ನನಗೆ ಒದಗಿರುತ್ತದೆ. ಈ ಬ್ರಹ್ಮವಾಕ್ಯಕ್ಕೆ ಎಂದಿಗೂ ಚ್ಯುತಿಯುಂಟಾಗಲಾರದು ॥೪೯॥

ದುರಾತ್ಮನಾದ ರಾವಣನು ತಾನು ಸರ್ವ ರಾಕ್ಷಸೇಶ್ವರನು ಎಂಬ ದುರಹಂಕಾರದಿಂದ ಸೀತಾಪಹಾರಮಾಡಿ ಆ ನಿಮಿತ್ತದಿಂದ ತನಗೂ ತನ್ನ ಪ್ರಜೆಗಳಾದ ಸರ್ವರಾಕ್ಷಸ ಕೋಟಿಗಳಿಗೂ ಮಹತ್ತಾದ ಅನರ್ಥವನ್ನು ತಂದಿಟ್ಟುಕೊಂಡಿರುತ್ತಾನೆ ॥೫೦॥

ಎಲೈ ಕಪಿವರ್ಯನೇ! ಇಗೋ ನೋಡು ಈ ಪಟ್ಟಣವು ರಾವಣಾಸುರನಿಂದ ರಕ್ಷಿಸಲ್ಪಡುತ್ತಾ ಇದೆ, ಹುಷಾರಾಗಿರು, ಇದನ್ನು ಪ್ರವೇಶಮಾಡಿ ಇಲ್ಲಿ ಏನೇನು ವಸ್ತುಗಳನ್ನು ನೋಡಲಪೇಕ್ಷಿಸುತ್ತೀಯೊ ಆ ವಸ್ತುಗಳೆಲ್ಲವನ್ನೂ ಸ್ವಚ್ಛಂದವಾಗಿ ನೋಡುವನಾಗು ಮತ್ತು ನಿನ್ನ ಯಾವತ್ತು ಕಾರ್ಯಗಳನ್ನು ಮಾಡಿಕೊಳ್ಳುವನಾಗು ॥೫೧॥

ಮೂ॥ ಪ್ರವಿಶ್ಯಶಾಪೋಪಹತ್ರಾಂ ಹರೀಶ್ವರಃ ಶುಭಾಂಪುರೀಂ ರಾಕ್ಷಸಮುಖ್ಯ ಪಾಲಿತಾಂ। ಯದೃಚ್ಛಯಾತ್ವಂಜನಕಾತ್ಮಜಾಂಸತೀಂ ವಿಮಾರ್ಗ ಸರ್ವತ್ರಗತೋಯಥಾಸುಖಂ ॥೩೨॥

ಇತ್ಯಾರ್ಷೆ ಶ್ರೀಮದ್ರಾಮಾಯಣೆ ವಾಲ್ಮೀಕೀಯೆ ಸುಂದರಕಾಂಡೆ ತೃತೀಯಸ್ಸರ್ಗಃ

| ಪದಚ್ಛೇದ | ಅನ್ವಯ |
| --- | --- |
| ಪ್ರವಿಶ್ಯ, ಶಾಪೋಪಹತಾಂ, ಹರೀಶ್ವರಃ, ಶುಭಾಂ, ಪುರೀಂ, ರಾಕ್ಷಸಮುಖ್ಯಪಾಲಿತಾಂ, ಯದೃಚ್ಛಯಾ, ತ್ವಂ, ಜನಕಾತ್ಮಜಾಂ, ಸತೀಂ, ವಿಮಾರ್ಗ, ಸರ್ವತ್ರ, ಗತಃ, ಯಥಾಸುಖಂ ॥೫೦॥ | ಹರೀಶ್ವರಃ ತ್ವಂ, ರಾಕ್ಷಸಮುಖ್ಯಪಾಲಿತಾಂ, ಶಾಪೋಪಹತಾಂ, ಶುಭಾಂ ಪುರೀಂ ಪ್ರವಿಶ್ಯ, ಸರ್ವತ್ರ, ಯದೃಚ್ಛಯಾ, ಗತಃ, ಸತೀಂ, ಜನಕಾತ್ಮಜಾಂ, ಯಥಾಸುಖಂ, ವಿಮಾರ್ಗ ॥೫೦॥ |

ಹರೀಶ್ವರಃ-ಕಪಿಶ್ರೇಷ್ಠನಾದ, ತ್ವಂ-ನೀನು, ರಾಕ್ಷಸಮುಖ್ಯಪಾಲಿತಾಂ-ರಾಕ್ಷಸಪ್ರಮುಖನಾದ ರಾವಣನಿಂದ ರಕ್ಷಿಸಲ್ಪಟ್ಟ, ಶಾಪೋಪಹತಾಂ-ನಂದಿಶಾಪದಿಂದ ದೂಷಿತವಾದ, ಶುಭಾಂ-ಶುಭಕರವಾದ, ಪುರೀಂ-ಲಂಕಾಪುರಿಯನ್ನು, ಪ್ರವಿಶ್ಯ-ಪ್ರವೇಶಮಾಡಿ, ಸರ್ವತ್ರ-ಯಲ್ಲಾಕಡೆಯಲ್ಲೂ, ಯದೃಚ್ಛಯಾ-ಸ್ವೇಚ್ಛೆಯಿಂದ, ಗತಃ-ಸಂಚರಿಸುವನಾಗಿ, ಸತೀಂ-ಪತಿವ್ರತೆಯಾದ, ಜನಕಾತ್ಮಜಾಂ-ಸೀತಾದೇವಿಯನ್ನು, ಯಥಾಸುಖಂ, ಇಷ್ಟಾನುಸಾರವಾಗಿ, ವಿಮಾರ್ಗ-ಹುಡುಕುವನಾಗು ॥೫೦॥

ಎಲೈ ಕಪಿವರ್ಯನೇ ರಾವಣನಿಂದ ಪರಿಪಾಲಿತವಾದ ಈ ಲಂಕೆಯು ಪುರಾತನ ಕಾಲದಲ್ಲಿ ನಂದಿಕೇಶ್ವರನ ಶಾಪಕ್ಕೆ ಗುರಿಯಾಗಿರತಕ್ಕದ್ದಾಗಿದೆ, ಈ ಪಟ್ಟಣವನ್ನು ಪ್ರವೇಶಮಾಡಿ ಯಥೇಚ್ಛವಾಗಿ ಅಲ್ಲಲ್ಲಿ ಸಂಚಾರಮಾಡುತ್ತಾ ಮಹಾ ಪತಿವ್ರತೆಯಾದ ಸೀತಾದೇವಿಯನ್ನು ಹುಡುಕುವನಾಗು॥೫೦॥

ಶ್ರೀಮದ್ರಾಮಾಯಣ ಸುಂದರಕಾಂಡಾರ್ಥ ಬೋಧಿನಿಯೊಳು ಮೂರನೆಯ ಸರ್ಗವು ಪರಿಸಮಾಪ್ತವಾದುದು.

## ಚತುರ್ಥಸ್ಸರ್ಗಃ ॥೪॥

ಮೂ ॥ ಸನಿರ್ಜಿತ್ಯಪುರೀಂಶ್ರೇಷ್ಠಾಂ ಲಂಕಾಂತ್ರಾಂಕಾಮರೂಪಿಣೀಂ ।
ವಿಕ್ರಮೇಣಮಹಾತೇಜಾ ಹನುಮಾನ್ಕಪಿಸತ್ತಮಃ ॥೧॥
ಅದ್ವಾರೇಣ ಮಹಾಬಾಹುಃ ಪ್ರಾಕಾರಮಭಿಪುಪ್ಲುವೇ ॥
ಪ್ರವಿಶ್ಯನಗರೀಂಲಂಕಾಂ ಕಪಿರಾಜಹಿತಂಕರಃ ।
ಚಕ್ರೇಥಪಾದಂಸವ್ಯಂಚ ಶತ್ರೂಣಾಂ ಸತುಮೂರ್ಧನಿ ॥೨॥

| ಪದಚ್ಛೇದ | ಅನ್ವಯ |
|---|---|
| ಸಃ, ನಿರ್ಜಿತ್ಯ, ಪುರೀಂ, ಶ್ರೇಷ್ಠಾಂ, ಲಂಕಾಂ ತಾಂ, ಕಾಮರೂಪಿಣೀಂ, ವಿಕ್ರಮೇಣ, ಮಹಾತೇಜಾಃ, ಹನುಮಾನ್, ಕಪಿಸತ್ತಮಃ, ಅದ್ವಾರೇಣ, ಮಹಾಬಾಹುಃ ಪ್ರಾಕಾರಮಭಿಪುಪ್ಲುವೇ ॥೧॥ | ಕಪಿಸತ್ತಮಃ, ಮಹಾಬಾಹುಃ, ಮಹಾತೇಜಾಃ ಸಃ ಹನುಮಾನ್, ಕಾಮರೂಪಿಣೀಂ, ಶ್ರೇಷ್ಠಾಂ ಪುರೀಂ ತಾಂ ಲಂಕಾಂ, ವಿಕ್ರಮೇಣ ನಿರ್ಜಿತ್ಯ ಅದ್ವಾರೇಣ, ಪ್ರಾಕಾರಂ, ಅಭಿಪುಪ್ಲುವೇ ॥೧॥ |
| ಪ್ರವಿಶ್ಯ, ನಗರೀಂ, ಲಂಕಾಂ, ಕಪಿರಾಜಹಿತಂಕರಃ, ಚಕ್ರೇ, ಅಥ, ಪಾದಂ, ಸವ್ಯಂ, ಚ, ಶತ್ರೂಣಾಂ, ಸಃ, ತು, ಮೂರ್ಧನಿ ॥೨॥ | ಕಪಿರಾಜಹಿತಂಕರಃ (ಸಃ), ಲಂಕಾಂ ನಗರೀಂ ಪ್ರವಿಶ್ಯ, ಅಥ ಸವ್ಯಂ, ಪಾದಂ ಅಗ್ರತಃ ಚಕ್ರೇ, ಸತು ಶತ್ರೂಣಾಂ ಮೂರ್ಧನಿ ಭವೇತ್ ॥೨॥ |

ಕಪಿಸತ್ತಮಃ-ವಾನರೋತ್ತಮನಾದ, ಮಹಾಬಾಹುಃ-ಅತ್ಯಧಿಕಭುಜಪರಾಕ್ರಮವುಳ್ಳ, ಮಹಾತೇಜಾಃ-ಅತಿಶಯವಾದತೇಜಸ್ಸುವುಳ್ಳ, ಸಃ ಹನುಮಾನ್-ಆ ಮಾರುತಿಯು, ಕಾಮರೂಪಿಣೀಂ-ಇಚ್ಛಾಧೀನವಾದರೂಪವುಳ್ಳ, ಶ್ರೇಷ್ಠಾಂ-ಉತ್ಕೃಷ್ಟವಾದ, ತಾಂ-ಆ ಪ್ರಸಿದ್ಧವಾದ, ಲಂಕಾಂ ಪುರೀಂ-ಲಂಕಾಪಟ್ಟಣವನ್ನು, ವಿಕ್ರಮೇಣ-ಪರಾಕ್ರಮದಿಂದ, ನಿರ್ಜಿತ್ಯ-ಜಯಿಸಿದವನಾಗಿ, ಅದ್ವಾರೇಣ-ದ್ವಾರವಿಲ್ಲದಪ್ರದೇಶದಿಂದ, ಪ್ರಾಕಾರಂ-ಕೋಟೆಯನ್ನು, ಅಭಿಪುಪ್ಲುವೇ-ಹಾರಿದನು ॥೧॥

ಕಪಿರಾಜಹಿತಂಕರಃ-ವಾನರರಾಜನಾದ ಸುಗ್ರೀವನಿಗೆ ಹಿತವನ್ನು ಮಾಡಲಿಚ್ಛೈಸಿರುವ, ಸಃ-ಆ ಮಾರುತಿಯು, ಲಂಕಾಂನಗರೀಂ-ಲಂಕಾಪಟ್ಟಣವನ್ನು, ಪ್ರವಿಶ್ಯ-ಪ್ರವೇಶಮಾಡಿ, ಅಥ-ಅನಂತರದಲ್ಲಿ, ಸವ್ಯಂ ಪಾದಂ-ಎಡಗಾಲನ್ನು, ಅಗ್ರತಃ-ಮುಂದುಗಡೆಯಲ್ಲಿ, ಚಕ್ರೇ-ಮಾಡಿದನು, ಸತು-ಆ ಎಡಗಾಲಾದರೊ, ಶತ್ರೂಣಾಂ-ಶತ್ರುಗಳ, ಮೂರ್ಧನಿ-ಸಿರಸ್ಸಿನಲ್ಲಿ, ಭವೇತ್-ಆದೀತು ॥೨॥

ವಾನರ ಶ್ರೇಷ್ಠನಾದ ಆ ಮಾರುತಿಯು ತನ್ನಬಾಹು ಬಲಪರಾಕ್ರಮದಿಂದ ಆ ಮಾಯಾವಿನಿಯಾದ ಲಂಕಿನಿಯನ್ನು ಜಯಿಸಿದವನಾಗಿ,* ದ್ವಾರವಿಲ್ಲದ ಪ್ರದೇಶದ

*ಗ್ರಾಮಂವಾ ನಗರಂ ವಾಪಿಪತ್ತನಂ ವಾಪರಸ್ಯಹಿ। ವಿಶೇಷಾತ್ರುಮಯ ಸೌಮ್ಯನದ್ವಾರೇಣ ವಿಶನ್ನೃಪಃ॥ ಅಂದರೆ ರಾಜನಾದವನು ಶತ್ರುನಗರವನ್ನು ಪ್ರವೇಶಮಾಡುವಾಗ ದ್ವಾರದಿಂದ ಪ್ರವೇಶಮಾಡಕೂಡದು ಎಂಬ ಅರ್ಥವನ್ನು ಇಲ್ಲಿ ಅನುಸಂಧಾನಮಾಡಬೇಕು.

ಮೂ ॥ ಪ್ರವಿಷ್ಟಸ್ಸತ್ವಸಂಪನ್ನೋ ನಿಶಾಯಾಂ ಮಾರುತಾತ್ಮಜಃ ।
ಸಮಹಾಪಥಮಾಸ್ಥಾಯ ಮುಕ್ತಾಪುಷ್ಪವಿರಾಜಿತಂ ॥
ಸೇವಿತಂರಾಕ್ಷಸೈರ್ಭೀಮೈರ್ಬಲಿಭಿಃಶಸ್ತ್ರಪಾಣಿಭಿಃ ॥೩-೪॥

| ಪದಚ್ಛೇದ | ಅನ್ವಯ |
|---|---|
| ಪ್ರವಿಷ್ಟಃ, ಸತ್ವಸಂಪನ್ನಃ, ನಿಶಾಯಾಂ, ಮಾರುತಾತ್ಮಜಃ, ಸಃ, ಮಹಾಪಥಂ, ಆಸ್ಥಾಯ, ಮುಕ್ತಾಪುಷ್ಪವಿರಾಜಿತಂ, ಸೇವಿತಂ, ರಾಕ್ಷಸೈಃ, ಭೀಮೈಃ, ಬಲಿಭಿಃ, ಶಸ್ತ್ರಪಾಣಿಭಿಃ ॥೪॥ | ಮಾರುತಾತ್ಮಜಃ ಸಃ ಧೈರ್ಯಸಂಪನ್ನಃ, ನಿಶಾಯಾಂ, ಮುಕ್ತಾಪುಷ್ಪವಿರಾಜಿತಂ, ಭೀಮೈಃ, ಬಲಿಭಿಃ, ಶಸ್ತ್ರಪಾಣಿಭಿಃ, ರಾಕ್ಷಸೈಃ, ಸೇವಿತಂ, ಮಹಾಪಥಂ ಆಸ್ಥಾಯ, ಪ್ರವಿಷ್ಟಃ ॥೪॥ |

ಮಾರುತಾತ್ಮಜಃ-ವಾಯುಪುತ್ರನಾದ, ಸಃ-ಆ ಮಾರುತಿಯು, ಧೈರ್ಯಸಂಪನ್ನಃ-ಧೈರ್ಯದಿಂದಯುಕ್ತನಾಗಿ, ನಿಶಾಯಾಂ-ರಾತ್ರಿಯಲ್ಲಿ, ಮುಕ್ತಾಪುಷ್ಪವಿರಾಜಿತಂ-ಮುತ್ತುಗಳಿಂದಲೂ ಹೂವುಗಳಿಂದಲೂ ಹೊಳೆಯುತ್ತಿರುವ, ಭೀಮೈಃ-ಭಯಂಕರರಾದ, ಬಲಿಭಿಃ-ಬಲಶಾಲಿಗಳಾದ, ಶಸ್ತ್ರಪಾಣಿಭಿಃ-ಆಯುಧದಾರಿಗಳಾದ, ರಾಕ್ಷಸೈಃ-ರಾಕ್ಷಸರುಗಳಿಂದ, ಸೇವಿತಂ-ಸೇವಿಸಲ್ಪಟ್ಟ, ಮಹಾಪಥಂ-ರಾಜಮಾರ್ಗವನ್ನು ಆಸ್ಥಾಯ-ಶೇರಿದವನಾಗಿ, ಪ್ರವಿಷ್ಟಃ-ಪ್ರವೇಶಮಾಡಿದನು ॥೪॥

ಮೂಲಕವಾಗಿ ಆ ಲಂಕಾ ನಗರಿಯಕೋಟೆಯನ್ನು ಒಂದೇಒಂದು ಹಾರಿಗೆ ಹಾರುವವನಾದನು॥೧॥

ಕಪಿರಾಜನಾದ ಸುಗ್ರೀವನಿಗೆ ಹಿತಾಚರಣೆ ಮಾಡುವದರಲ್ಲಿ ಬದ್ಧಕಂಕಣನಾದ ಆ ಮಾರುತಿಯು ಆ ರಾಕ್ಷಸ ರಾಜಧಾನಿಯಾದ ಲಂಕಾನಗರವನ್ನು ಪ್ರವೇಶಮಾಡಲುಪಕ್ರಮಿಸಿ, ಪ್ರಥಮತಃ ತನ್ನ ವಾಮಪಾದವನ್ನು ಇಡುವನಾದನು ॥೨॥

ವಾಯುಪುತ್ರನಾದ ಆ ಮಾರುತಿಯು ಧೈರ್ಯಯುಕ್ತನಾಗಿ, ದಿವ್ಯಾಲಂಕಾರಗಳಿಂದ ಪ್ರಕಾಶಿತವಾಗಿಯೂ, ರಾಜಭಟರುಗಳಿಂದ ಸಂರಕ್ಷಿಸಲ್ಪಟ್ಟದ್ದಾಗಿಯೂ ಇರುವ ಆ ಮಹಾನಗರಿಯ ವಿಸ್ತಾರವಾದಮಾರ್ಗವನ್ನು ಶೇರಿ ತನ್ಮೂಲಕ ಆ ರಾಕ್ಷಸರಾಜಧಾನಿಯ ಮಧ್ಯಕ್ಕೆ ಪ್ರವೇಶಮಾಡುವನಾದನು॥೩-೪॥

“ಪ್ರಯಾಣಕಾಲೇಚ ಗೃಹ ಪ್ರವೇಶವಿವಾಹಕಾಲೇಪಿಚದಕ್ಷಿಣಾಂ ಘ್ರಿಂ। ಕೃತ್ವಾಗ್ರತಃ ಶತ್ರುಪುರಪ್ರವೇಶೆ ವಾಮಂ ನಿದಧ್ಯಾಚ್ಚರಣಂ ನೃಪಾಲಃ” ಅಂದರೆ ಪ್ರಯಾಣಾದಿಕಾಲಗಳಲ್ಲಿ ದಕ್ಷಿಣಪಾದವನ್ನೂ,ಶತ್ರುಪತ್ತನಕ್ಕೆ ಪ್ರವೇಶಮಾಡುವಕಾಲದಲ್ಲಿ ಮೊದಲುವಾಮಪಾದವನ್ನು ಇಡಬೇಕೆಂತಲೂ ಹೇಳಿರುವನಿಮಿತ್ತ ಶಾಸ್ತ್ರವನ್ನು ಅನುಸಂಧಾನಮಾಡಿ ಮಾರುತಿಯು ಪ್ರಥಮತಃ ಲಂಕಾಪ್ರವೇಶಮಾಡಿದನು ಎಂದು ತಿಳಿಯಬೇಕು.

ಮೂ ‖ ತತಸ್ತು ತಾಂಪುರೀಂಲಂಕಾಂ ರಮ್ಯಾಮಭಿಯಯೌಕಪಿಃ ‖
ಹಸಿತೋತ್ಕೃಷ್ಟನಿನದೈಸ್ತೂರ್ಯಘೋಷಪುರಸ್ಸರೈಃ ‖
ವಜ್ರಾಂಕುಶನಿಕಾಶೈಶ್ಚ ವಜ್ರಜಾಲವಿಭೂಷಿತೈಃ ।
ಗೃಹಮೇಘೈಃ ಪುರೀರಮ್ಯಾಬಭಾಸೇದ್ಯೌರಿವಾಂಬುದೈಃ ‖೫-೬‖

ಪದಚ್ಛೇದ

ತತಃ, ತು, ತಾಂ, ಪುರೀಂ, ಲಂಕಾಂ, ರಮ್ಯಾಂ, ಅಭಿಯಯೌ, ಕಪಿಃ, ಹಸಿತೋತ್ಕೃಷ್ಟನಿನದೈಃ, ತೂರ್ಯಘೋಷಪುರಸ್ಸರೈಃ‖ ವಜ್ರಾಂಕುಶನಿಕಾಶೈಃ, ಚ, ವಜ್ರಜಾಲವಿಭೂಷಿತೈಃ, ಗೃಹಮೇಘೈಃ, ಪುರೀ ರಮ್ಯಾ, ಬಭಾಸೇ, ದ್ಯೌಃ, ಇವ, ಅಂಬುದೈಃ ‖೫-೬‖

ಅನ್ವಯ

ತತಸ್ತು, ಕಪಿಃ, ರಮ್ಯಾಂ, ತಾಂ, ಲಂಕಾಂ, ಪುರೀಂ, ಅಭಿಯಯೌ, ಹಸಿತೋತ್ಕೃಷ್ಟನಿನದೈಃ, ತೂರ್ಯಘೋಷಪುರಸ್ಸರೈಃ, ವಜ್ರಾಂಕುಶನಿಕಾಶೈಃ, ಚ, ವಜ್ರಜಾಲವಿಭೂಷಿತೈಃ, ಗೃಹಮೇಘೈಃ, ರಮ್ಯಾ ಪುರೀ, ಅಂಬುದೈಃ ದ್ಯೌರಿವ ಬಭಾಸೇ ‖೫-೬‖

ತತಸ್ತು-ಅನಂತರದಲ್ಲಾದರೊ, ರಮ್ಯಾಂ-ರಮಣೀಯವಾದ, ತಾಂ-ಆ ಪ್ರಸಿದ್ಧವಾದ, ಲಂಕಾಂ ಪುರೀಂ-ಲಂಕಾಪಟ್ಟಣವನ್ನು ಕುರಿತು, ಅಭಿಯಯೌ-ಅಭಿಮುಖನಾಗಿ ಹೊರಟನು; ಹಸಿತೋತ್ಕೃಷ್ಟನಿನದೈಃ-ಸ್ತ್ರೀಪುರುಷರನಗೋಣವೆಂಬ ಉತ್ಕೃಷ್ಟಧ್ವನಿಯುಳ್ಳ, ವಜ್ರಾಂಕುಶನಿಕಾಶೈಃ-ವಜ್ರಾಯುಧವೆ ಅಂಕುಶವಾಗಿ ಉಳ್ಳ ಐರಾವತಕ್ಕೆ ಸಮಾನಗಳಾದ, ವಜ್ರಜಾಲವಿಭೂಷಿತೈಃ-ವಜ್ರಮಣಿಗಳಸಮೂಹದಿಂದಲಂಕರಿಸಲ್ಪಟ್ಟ, ಗೃಹಮೇಘೈಃ-ಗೃಹಗಳೆಂಬಮೇಘಗಳಿಂದ, ರಮ್ಯಾ-ಮನೋಹರವಾದ, ಪುರೀ-ಲಂಕಾಪಟ್ಟಣವು, ಅಂಬುದೈಃ-ಮೇಘಗಳಿಂದ, ದ್ಯೌರಿವ-ಗಗನಮಂಡಲವೋಪಾದಿಯಲ್ಲಿ ಬಭಾಸೇ-ಪ್ರಕಾಶಿಸ ತಲಿತ್ತು ‖೫-೬‖

ಮಾರುತಿಯು ಆ ಲಂಕಾರಾಜಧಾನಿಯನ್ನು ಪ್ರವೇಶ ಮಾಡಿದ ಕಾಲದಲ್ಲಿ ಆ ನಗರಿಯು ಅತಿರಮಣೀಯವಾದದ್ದಾಗಿತ್ತು. ಎಲ್ಲಿನೋಡಿದಾಗ್ಯೂ ಸ್ತ್ರೀ ಪುರುಷರೆಲ್ಲರೂಸಂತೋಷಭರಿತರಾಗಿ ಸರ್ವದಾ ನಗುತ್ತಲೇ ಇರುತ್ತಿದ್ದರು, ಎಲ್ಲಿನೋಡಿದರೂ ಮಂಗಳವಾದ್ಯಗಳು ವಿಜೃಂಭಿತಗಳಾಗುತಿದ್ದವು; ಎಲ್ಲಿನೋಡಿದರೂ ಐರಾವತದಂತೆ ಅತಿಶುಭ್ರಗಳಾದ ಮನೆಗಳು ಕಾಣಿಸುತ್ತಿದ್ದವು ಇವುಗಳೆಲ್ಲವನ್ನು ನೋಡುತ್ತಿದ್ದ ಮಾರುತಿಗೆ ತತ್ಕಾಲದಲ್ಲಿ ಆಪಟ್ಟಣವು ಮಳೆ ಕರಿಯುತ್ತಿರುವ, ಗುಡುಗುಮಿಂಚುಗಳಿಂದ ಯುಕ್ತಗಳಾದ ಮೇಘಪಙ್ತಿಗಳಿಂದ ನಕ್ಷತ್ರಮಂಡಲ ಯಾವರೀತಿಯಲ್ಲಿ ಶೋಭಿಸುತ್ತಲಿರುವದೋ ಆ ರೀತಿಯಲ್ಲಿ ಪರಿಶೋಭಿಸುವಂತೆ ಕಂಡಿತು. ‖೫-೬‖

ಮೂ॥ ಪ್ರಜಜ್ವಾಲ ತದಾ ಲಂಕಾ ರಕ್ಷೋಗಣಗೃಹೈಶ್ಶುಭೈಃ ।
ಸಿತಾಭ್ರಸದೃಶೈಶ್ಚಿತ್ರೈಃ ಪದ್ಮಸ್ವಸ್ತಿಕಸಂಸ್ಥಿತೈಃ ॥
ವರ್ಧಮಾನಗೃಹೈಶ್ಚಾಪಿ ಸರ್ವತಸ್ಸುವಿಭೂಷಿತಾ ।
ಗೃಹಮುಖ್ಯೈಃ ಪುರೀ ರಮ್ಯಾ ಬಭಾಸೇ ದ್ಯೌರಿವಾಂಬುದೈಃ ॥೭-೮॥
ತಾಂ ಚಿತ್ರಮಾಲ್ಯಾಭರಣಾಂ ಕಪಿರಾಜಹಿತಂಕರಃ ।
ರಾಘವಾರ್ಥಂ ಚರನ್ ಶ್ರೀಮಾನ್ ದದರ್ಶ ಚ ನನಂದ ಚ ॥೯॥

ಪದಚ್ಛೇದ

ಪ್ರಜಜ್ವಾಲ, ತದಾ, ಲಂಕಾ, ರಕ್ಷೋಗಣಗೃಹೈಃ, ಶುಭೈಃ, ಸಿತಾಭ್ರಸದೃಶೈಃ, ಚಿತ್ರೈಃ, ಪದ್ಮಸ್ವಸ್ತಿಕ ಸಂಸ್ಥಿತೈಃ, ವರ್ಧಮಾನಗೃಹೈಃ, ಚ, ಅಪಿ, ಸರ್ವತಃ, ಸುವಿಭೂಷಿತಾ, ಗೃಹಮುಖ್ಯೈಃ, ಪುರೀ, ರಮ್ಯಾ, ಬಭಾಸೆ, ದ್ಯೌಃ, ಇವ, ಅಂಬುದೈಃ ॥೭-೮॥

ತಾಂ, ಚಿತ್ರಮಾಲ್ಯಾಭರಣಾಂ, ಕಪಿರಾಜಹಿತಂಕರಃ, ರಾಘವಾರ್ಥಂ, ಚರನ್, ಶ್ರೀಮಾನ್, ದದರ್ಶ, ಚ, ನನಂದ, ಚ ॥೯॥

ಅನ್ವಯ

ತದಾ, ಸೀತಾಭ್ರಸದೃಶೈಃ, ಚಿತ್ರೈಃ, ಪದ್ಮಸ್ವಸ್ತಿಕ ಸಂಸ್ಥಿತೈಃ, ವರ್ಧಮಾನಗೃಹೈಶ್ಚಾಪಿ, ಶುಭೈಃ ರಕ್ಷೋಗಣಗೃಹೈಃ, ಸರ್ವತಃ ಸುವಿಭೂಷಿತಾ ಲಂಕಾ ಪ್ರಜಜ್ವಾಲ ॥೭-೮॥

ಕಪಿರಾಜಹಿತಂಕರಃ, ಶ್ರೀಮಾನ್, ರಾಘವಾರ್ಥಂ ಚರನ್, ಚಿತ್ರಮಾಲ್ಯಾಭರಣಾಂ, ತಾಂ, ದದರ್ಶ, ನನಂದಚ ॥೯॥

ತದಾ-ಆ ಕಾಲದಲ್ಲಿ, ಸೀತಾಭ್ರಸದೃಶೈಃ-ಶುಭ್ರಮೇಘಗಳಿಗೆ ಸಮಾನಗಳಾದ, ಚಿತ್ರೈಃ-ವಿಚಿತ್ರಗಳಾದ, ಪದ್ಮಸ್ವಸ್ತಿಕಸಂಸ್ಥಿತೈಃ-ಕಮಲಾಕಾರವಾಗಿಯೂ, ಸ್ವಸ್ತಿಕ ಅಂದರೆ ದಕ್ಷಿಣ ಪಶ್ಚಿಮ ಉತ್ತರದ್ವಾರಗಳಿಂದಕೂಡಿ ಜಡರವಾಗಿರುವ ಕಟ್ಟುವಿಕೆಯುಸನ್ನಿವೇಶಗಳುಳ್ಳ, ವರ್ಧಮಾನಗೃಹೈಃ-ಪೂರ್ವ ಪಶ್ಚಿಮ ಉತ್ತರದಿಕ್ಕುಗಳಲ್ಲಿಮಾತ್ರದ್ವಾರಗಳಿರುವ ರಾಜಗೃಹಭೇದಗಳಿಂದಲೂ, ಶುಭೈಃ-ಶುಭಕರಗಳಾದ ರಕ್ಷೋಗಣಗೃಹೈಃ-ರಾಕ್ಷಸರಸಮುದಾಯದ ಸಾಮಾನ್ಯಗೃಹಗಳಿಂದಲೂ, ಸರ್ವತಃ-ಎಲ್ಲಾಕಡೆಯಲ್ಲೂ, ಸುವಿಭೂಷಿತಾ-ಅಲಂಕರಿಸಲ್ಪಟ್ಟ, ಲಂಕಾ-ಲಂಕಾಪಟ್ಟಣವು, ಪ್ರಜಜ್ವಾಲ-ಹೊಳೆಯುತ್ತಿತ್ತು ॥

ಕಪಿರಾಜಹಿತಂಕರಃ-ಸುಗ್ರೀವನಿಗೆ ಪ್ರಿಯಕರನಾದ. ಶ್ರೀಮಾನ್ ಸಂಪದ್ಯುಕ್ತನಾದ, ಸಃ-ಆಮಾರುತಿಯು, ರಾಘವಾರ್ಥಂ-ಶ್ರೀರಾಮಚಂದ್ರನಿಗೋಸ್ಕರ, ಚರನ್-ಸಂಚಾರಮಾಡುತಲಿರುವವನಾಗಿ, ಚಿತ್ರಮಾಲ್ಯಾಭರಣಾಂ-ವಿಚಿತ್ರಗಳಾದ ಮಾಲಿಕೆಗಳೂ ಆಭರಣಗಳೂ ಉಳ್ಳ, ತಾಂ-ಆ ಲಂಕಾಪಟ್ಟಣವನ್ನು, ದದರ್ಶ-ನೋಡುವನಾದನು, ನನಂದಚ_ಸಂತೋಷವನ್ನು ಪಡುವನಾದನು ॥೯॥

ತತ್ಕಾಲದಲ್ಲಿ ಸ್ವಚ್ಛತರಗಳಾದ ಮೇಘಗಳೋಪಾದಿಯಲ್ಲಿ ಕಂಗೊಳಿಸುತಲಿರುವ ನಾನಾವಿಧ ರಚನಾವಿಶೇಷಗಳಿಂದ ಯುಕ್ತಗಳಾದ ಗೃಹಗಳಿಂದಲೂ, ಪದ್ಮಸ್ವಸ್ತಿಕ ವರ್ಧಮಾನಗಳೆಂದು ಶಾಸ್ತ್ರಪ್ರಸಿದ್ಧಗಳಾದ ರಚನಾವಿಶೇಷಯುಕ್ತಗಳಾಗಿಯೂ ಇರುವ

ಮೂ ॥ ಭವನಾದ್ಭವನಂ ಗಚ್ಛನ್ ದದರ್ಶಪವನಾತ್ಮಜಃ ।
ವಿವಿಧಾಕೃತಿರೂಪಾಣಿ ಭವನಾನಿತತಸ್ತತಃ ॥೧೦॥
ಶುಶ್ರಾವಮಧುರಂಗೀತಂ ತ್ರಿಸ್ಥಾನಸ್ವರಭೂಷಿತಮ್ ।
ಸ್ತ್ರೀಣಾಂಮದಸಮೃದ್ಧಾನಾಂ ದಿವಿಚಾಪ್ಸರಸಾಮಿವ ॥೧೧॥

| ಪದಚ್ಛೇದ | ಅನ್ವಯ |
|---|---|
| ಭವನಾತ್, ಭವನಂ, ಗಚ್ಛನ್, ದದರ್ಶ, ಪವನಾತ್ಮಜಃ, ವಿವಿಧಾಕೃತಿರೂಪಾಣಿ, ಭವನಾನಿ, ತತಃ ತತಃ ॥೧೦॥ | ಪವನಾತ್ಮಜಃ, ಭವನಾತ್, ಭವನಂ,ಗಚ್ಛನ್, ವಿವಿಧಾಕೃತಿರೂಪಾಣಿ ಭವನಾನಿ, ತತಸ್ತತಃ ದದರ್ಶ ॥೧೦॥ |
| ಶುಶ್ರಾವ, ಮಧುರಂ, ಗೀತಂ, ತ್ರಿಸ್ಥಾನಸ್ವರಭೂಷಿತಂ, ಸ್ತ್ರೀಣಾಂ, ಮದಸಮೃದ್ಧಾನಾಂ, ದಿವಿ, ಚ, ಅಪ್ಸರಸಾಂ, ಇವ ॥೧೧॥ | ದಿವಿ ಅಪ್ಸರಸಾಮಿವ, ಮದಸಂಮೃದ್ಧಾನಾಂ ಸ್ತ್ರೀಣಾಂ,ತ್ರಿಸ್ಥಾನಸ್ವರಭೂಷಿತಂ, ಮಧುರಂ ಗೀತಂ, ಶುಶ್ರಾವ ॥೧೧॥ |

ಪವನಾತ್ಮಜಃ-ವಾಯುಪುತ್ರನಾದ ಆ ಮಾರುತಿಯು, ಭವನಾತ್-ಮನೆಯಿಂದ, ಭವನಂ-ಮನೆಯನ್ನು, ಗಚ್ಛನ್-ಹೋಗುವನಾಗಿ, ವಿವಿಧಾಕೃತಿರೂಪಾಣಿ-ನಾನಾವಿಧಗಳಾದ ಆಕಾರಗಳೂ ವರ್ಣಗಳೂ ಉಳ್ಳ, ಭವನಾನಿ-ಮನೆಗಳನ್ನು, ತತಸ್ತತಃ-ಅಲ್ಲಲ್ಲಿ, ದದರ್ಶ-ನೋಡುವನಾದನು ॥೧೦॥

ದಿವಿ-ಅಂತರಿಕ್ಷದಲ್ಲಿ, ಅಪ್ಸರಸಾಮಿವ-ಅಪ್ಸರಸ್ತ್ರೀಯರುಗಳೋಪಾದಿಯಲ್ಲಿರುವ, ಮದಸಂಮೃದ್ಧಾನಾಂ-ಮದದಿಂದಯುಕ್ತರಾದ, ಸ್ತ್ರೀಣಾಂ-ಹೆಂಗಸರ, ತ್ರಿಸ್ಥಾನಸ್ವರಭೂಷಿತಂ-ಉರಃ ಕಂಠ ಶಿರಸ್ಥಾನಗಳಲ್ಲಿ ಜನ್ಯಗಳಾದ ಮಂದ್ರ ಮಧ್ಯಮತಾರಗಳೆಂಬಸ್ವರಗಳಿಂದ ಅಲಂಕರಿಸಲ್ಪಟ್ಟ, ಗೀತಂ-ಗಾನವನ್ನು, ಶುಶ್ರಾವ-ಕೇಳಿದನು ॥೧೧॥

ಸರ್ವತೋ ವಿಭೂಷಿತಗಳಾದ ರಾಕ್ಷಸಗೃಹಗಳಿಂದ ಆ ಲಂಕಾಪಟ್ಟಣವು ಪ್ರಕಾಶಮಾನವಾಗಿತ್ತು ॥೭-೮॥

ತನ್ನ ಒಡೆಯನಾದ ಸುಗ್ರೀವನಿಗೆ ಹಿತವನ್ನಾಚರಿಸುವ ಸ್ವಭಾವವುಳ್ಳ, ಅಣಿಮಾದಿ ಅಷ್ಟಸಂಪದ್ಯುಕ್ತನಾದ, ಆ ಮಾರುತಿಯು, ಶ್ರೀ ರಾಮಕಾರ್ಯದ ನಿಮಿತ್ತವಾಗಿ,ಅಲ್ಲಲ್ಲಿ ಸಂಚರಿಸುತ್ತಾ ನಾನಾಪುಷ್ಪಮಾಲೆಗಳೂ, ಆಭರಣಗಳೂ ಇವುಗಳಿಂದ ಭೂಷಿತವಾದ ಆ ಲಂಕಾನಗರಿಯನ್ನು ನೋಡಿ ಅತ್ಯಂತ ಸಂತುಷ್ಟಾಂತಃಕರಣನಾದನು ॥೯॥

ವಾಯುಪುತ್ರನಾದ ಭಗವಾನ್ ಮಾರುತಿಯು ಆ ಲಂಕಾನಗರಿಯಲ್ಲಿ ಒಂದುಮನೆಯಿಂದ ಮತ್ತೊಂದುಮನೆಗೆ ಸಂಚಾರಮಾಡುತ್ತಾ ನಾನಾವಿಧಗಳಾದ ರಚನಾವಿಶೇಷಗಳೂ ನಾನಾವರ್ಣಗಳೂ ಉಳ್ಳ ಅನೇಕಾನೇಕ ಮನೆಗಳನ್ನು ಅಲ್ಲಲ್ಲಿನೋಡುವನಾದನು॥೧೦॥

ಮೂ ॥ ಶುಶ್ರಾವಕಾಂಚೀನಿನದಂ ನೂಪುರಾಣಾಂಚನಿಸ್ವನಂ ।
ಸೋಪಾನನಿನದಾಂಶ್ಚೈವ ಭವನೇಷುಮಹಾತ್ಮನಾಂ ೧೨ ॥
ಆಸ್ಫೋಟಿತನಿನಾದಾಂಶ್ಚ ಕ್ಷ್ವೇಳಿತಾಂಶ್ಚ ತತಸ್ತತಃ ।
ಶುಶ್ರಾವಜಪತಾಂತತ್ರ ಮಂತ್ರಾನ್ರಕ್ಷೋಗೃಹೇಷುವೈ ॥೧೩॥

ಪದಚ್ಛೇದ

ಶುಶ್ರಾವ, ಕಾಂಚೀನಿನದಂ, ನೂಪೂರಾಣಾಂ, ಚ, ನಿಸ್ವನಂ, ಸೋಪಾನನಿನದಾನ್, ಚ, ಏವ, ಭವನೇಷು, ಮಹಾತ್ಮನಾಂ ॥೧೨॥

ಆಸ್ಫೋಟಿತನಾದಾನ್, ಚ, ಕ್ಷ್ವೇಳಿತಾನ್, ಚ, ತತಃ ತತಃ, ಶುಶ್ರಾವ, ಜಪತಾಂ, ತತ್ರ, ಮಂತ್ರಾನ್, ರಕ್ಷೋಗೃಹೇಷು, ವೈ॥೧೩॥

ಅನ್ವಯ

ಮಹಾತ್ಮನಾಂ ಭವನೇಷು, ಕಾಂಚೀನಿನದಂ, ನೂಪುರಾಣಾಂ ನಿಸ್ವನಂಚ, ಸೋಪಾನನಿನದಾಂಶ್ಚ (ಮಾರುತಿಃ) ಶುಶ್ರಾವ ॥೧೨॥

(ಸಃ) ತತ್ರ, ರಕ್ಷೋಗೃಹೇಷು ತತಸ್ತತಃ ಆಸ್ಫೋಟಿತ ನಿನಾದಾನ್‌ಕ್ಷ್ವೇಳಿತಾನ್, ಜಪತಾಂ, ಮಂತ್ರಾಂಶ್ಚ, ಶುಶ್ರಾವ॥೧೩॥

ಮಹಾತ್ಮಾನಾಂ-ಮಹಾನುಭಾವರಾದ ಆ ರಾಕ್ಷಸರ, ಭವನೇಷು-ಮನೆಗಳಲ್ಲಿ, ಕಾಂಚೀನಿನದಂ-ಒಡ್ಯಾಣಗಳಧ್ವನಿಯನ್ನು, ನೂಪುರಾಣಾಂ-ಕಾಲುಸರಪಣಿಗಳ, ನಿಸ್ವನಂಚ, ಧ್ವನಿಯನ್ನೂ ಕೂಡ ಸೋಪಾನನಿನದಾಂಶ್ಚ, ಪಾವಟಿಗೆಗಳಲ್ಲಿ ಸ್ತ್ರೀರುಗಳಸಂಚಾರದಿಂದುಂಟಾದ ಕಾಲುಸರಪಣಿಗಳಧ್ವನಿಗಳನ್ನೂಕೂಡ, ಶುಶ್ರಾವ-ಕೇಳಿದನು ೧೨॥

ಸಃ-ಆ ಮಾರುತಿಯು, ತತ್ರ-ಆ ಲಂಕಾಪಟ್ಟಣದಲ್ಲಿ, ರಕ್ಷೋಗೃಹೇಷು-ರಾಕ್ಷಸರಮನೆಗಳಲ್ಲಿ ತತಸ್ತತಃ-ಅಗಾಗ್ಯೆ, ಆಸ್ಫೋಟಿತ ನಿನಾದಾನ್-ಸಂತೋಷ ಸೂಚಕವಾದ; ಕೈತಟ್ಟುವಿಕೆಯಿಂದುಂಟಾದಧ್ವನಿಗಳನ್ನೂ, ಕ್ಷ್ವೇಳಿತಾಂಶ್ಚ-ಸಿಂಹನಾದಗಳನ್ನೂ ಕೂಡ, ಚ-ಮತ್ತು, ಜಪತಾಂ-ವೇದಮಂತ್ರಗಳನ್ನುಜಪಿಸುತ್ತಲಿರುವ ಜನಗಳ, ಮಂತ್ರಾನ್-ಮಂತ್ರವರ್ಣಗಳನ್ನು, ಶುಶ್ರಾವ-ಕೇಳಿದನು ॥೧೩॥

ಆ ಲಂಕಾ ಪಟ್ಟಣದಲ್ಲಿ ಸಂಚರಿಸುತ್ತಲಿರುವಾಗ್ಯೆ ಅಲ್ಲಿನ ಸ್ತ್ರೀಯರು ವಕ್ಷಸ್ಥಳದಲ್ಲಿಯೂ ಕಂಠದಲ್ಲಿಯೂ, ಶಿರಸ್ಥಾನದಲ್ಲಿಯೂ ಅಭಿವ್ಯಕ್ತಗಳಾಗತಕ್ಕ ಮಂದ್ರ ಮಧ್ಯಮತಾರಗಳೆಂಬ ಸ್ವರಗಳಿಂದ ಅಲಂಕರಿಸಲ್ಪಟ್ಟ ಗೀತವನ್ನು ಹಾಡುತ್ತಲಿರುವದನ್ನು ಕೇಳಿ,ಸ್ವರ್ಗ ಪಥದಲ್ಲಿ ಗಾನಮಾಡುತಲಿರುವ ಅಪ್ಸರಸ್ತ್ರೀಯರುಗಳೇ ಇವರಿರಬಹುದೆಂದು ಆ ಮಾರುತಿಯು ಭಾವಿಸುವಂತೆ ಅಲ್ಲಿನಗಾನವು ಸುಶ್ರಾವ್ಯವಾಗಿತ್ತು॥೧೧॥

ಆ ರಾಕ್ಷಸರಮಧ್ಯೆ ಮಹಾತ್ಮರಾದವರ ಮನೆಗಳಲ್ಲಿ, ಯುವತಿಯರು ಸಂಚರಿಸುತಲಿರುವಾಗ್ಯೆ ಮತ್ತು ಅವರು ಸೋಪಾನಗಳಲ್ಲಿ ಹತ್ತುವದು ಇಳಿಯುವದು ಇದನ್ನುಮಾಡುತ್ತಿರುವಾಗ್ಯೆ ಅವರು ಧರಿಸಿದ್ದಡಾಬುಗಳೂ ಮತ್ತು ಕಾಲುಸರಪಣಿಗಳೂ ಇವೇ ಮೊದಲಾದ ಶುಭ ಸೂಚಕಗಳಾದ ಧ್ವನಿಗಳನ್ನು ಕೇಳಿದನು॥೧೨॥

ಮೂ ॥ ಸ್ವಾಧ್ಯಾಯನಿರತಾಂಶ್ಚೈವ ಯಾತುಧಾನಾನ್ ದದರ್ಶಸಃ ।
ರಾವಣಸ್ತವಸಂಯುಕ್ತಾನ್ ಗರ್ಜತೋರಾಕ್ಷಸಾನಪಿ ॥೧೪॥
ರಾಜಮಾರ್ಗಂಸಮಾವೃತ್ಯ ಸ್ಥಿತಂರಕ್ಷೋಬಲಂಮಹತ್ ।
ದದರ್ಶಮಧ್ಯಮೇಗುಲ್ಮೇ ರಾವಣಸ್ಯಚರಾನ್ ಬಹೂನ್ ॥೧೫॥

**ಪದಚ್ಛೇದ**

ಸ್ವಾಧ್ಯಾಯನಿರತಾನ್, ಚ, ಏವ, ಯಾತುಧಾನಾನ್, ದದರ್ಶ ಸಃ, ರಾವಣಸ್ತವಸಂಯುಕ್ತಾನ್ ಗರ್ಜತಃ, ರಾಕ್ಷಸಾನ್, ಅಪಿ ॥೧೪॥

ರಾಜಮಾರ್ಗಂ, ಸಮಾವೃತ್ಯ, ಸ್ಥಿತಂ, ರಕ್ಷೋಬಲಂ, ಮಹತ್, ದದರ್ಶ, ಮಧ್ಯಮೇ, ಗುಲ್ಮೇ, ರಾವಣಸ್ಯ, ಚರಾನ್, ಬಹೂನ್ ॥೧೫॥

**ಅನ್ವಯ**

ಸಃ, ಸ್ವಾಧ್ಯಾಯನಿರತಾನ್, ಯಾತುಧಾನಾನ್, ರಾವಣಸ್ತವಸಂಯುಕ್ತಾನ್ ಗರ್ಜತಃ, ರಾಕ್ಷಸಾನಪಿ. ದದರ್ಶ ॥೧೪॥

ಸಃ ರಾಜಮಾರ್ಗಂ, ಸಮಾವೃತ್ಯ, ಸ್ಥಿತಂ, ಮಹತ್, ರಕ್ಷೋಬಲಂ, ಮಧ್ಯಮೇ, ಗುಲ್ಮೇ, ಬಹೂನ್, ರಾವಣಸ್ಯ, ಚರಾನ್, ದದರ್ಶ ॥೧೫॥

ಸಃ-ಆ ಮಾರುತಿಯು, ಸ್ವಾಧ್ಯಾಯನಿರತಾನ್-ವೇದಾಧ್ಯಯನದಲ್ಲಿ ಆಸಕ್ತರಾದ, ಯಾತುಧಾನಾನ್-ಅಸುರನಿಕರವನ್ನೂ, ರಾವಣಸ್ತವಸಂಯುಕ್ತಾನ್-ರಾವಣಸ್ತೋತ್ರದಲ್ಲಿ ಆಸಕ್ತರಾದ, ಗರ್ಜತಃ-ಮೇಘಧ್ವನಿಗಳನ್ನು ಮಾಡುತ್ತಲಿರುವ, ರಾಕ್ಷಸಾನಪಿ-ರಾಕ್ಷಸರನ್ನು ಕೂಡ,ದದರ್ಶ-ನೋಡಿದನು।೧೪

ಸಃ-ಆ ಮಾರುತಿಯು, ರಾಜಮಾರ್ಗಂ-ದೊಡ್ಡರಸ್ತೆಯನ್ನು, ಸಮಾವೃತ್ಯ-ಆವರಿಸಿಕೊಂಡು, ಸ್ಥಿತಂ-ಇರುವಂಥಾ, ಮಹತ್-ದೊಡ್ಡದಾದ, ರಕ್ಷೋಬಲಂ-ರಾಕ್ಷಸಸೈನ್ಯವನ್ನು, ಮಧ್ಯಮೇ-ಪಟ್ಟಣದ ಮಧ್ಯೆ ಇರುವ, ಗುಲ್ಮೇ-ಸೇನಾನಿವೇಶಸ್ಥಾನದಲ್ಲಿ, ರಾವಣಸ್ಯ-ರಾವಣನ, ಬಹೂನ್- ಅನೇಕರಾದ, ಚರಾನ್-ಸೇವಾಜನಗಳನ್ನು, ದದರ್ಶ-ನೋಡಿದನು ॥೧೫॥

ಆ ಲಂಕಾಪಟ್ಟಣದಲ್ಲಿ ಮಾರುತಿಯು ಸಂಚರಿಸುತ್ತಲಿರುವಕಾಲದಲ್ಲಿ ರಾಕ್ಷಸರಗೃಹಗಳಲ್ಲಿ, ಕೆಲವುಕಡೆಶೌರ್ಯ ಸೂಚಕಗಳಾದ ಸಿಂಹನಾದಗಳನ್ನೂ, ಕೆಲವುಕಡೆಸಂತೋಷಸೂಚಕಗಳಾದ ಹಸ್ತಾಸ್ಫಾಲನಗಳನ್ನೂ (ಚಪ್ಪಾಳೆತಟ್ಟುವಿಕೆ) ಕೆಲವುಕಡೆ ಋಗ್ವೇದಗಳನ್ನು ಅಧ್ಯಯನಮಾಡತಕ್ಕ ಮಹಾತ್ಮರ ಮಂತ್ರವರ್ಣ ಜಪಗಳನ್ನೂ ಪದೆ ಪದೇ ಕೇಳುವನಾದನು ॥೧೩॥

ಆ ಲಂಕಾ ರಾಜಧಾನಿಯಲ್ಲಿ ಸಂಚಾರಮಾಡುತ್ತಲಿರುವಾಗ್ಯೆ ಮಾರುತಿಯು ಕೆಲವು ಭಾಗದಲ್ಲಿ ವೇದಾಧ್ಯಯನವನ್ನು ಮಾಡುತ್ತಲಿರುವ ಶಿಷ್ಟರನ್ನೂ, ಕೆಲವುಕಡೆ ರಾವಣನನ್ನು

*ಈ ಶ್ಲೋಕದಿಂದ ಲಂಕಾರಾಜ್ಯದಲ್ಲಿ ಶಾಸ್ತ್ರಾಧ್ಯಯನ ಮಾಡತಕ್ಕ ಶಿಷ್ಟರಾದ ಸಾತ್ವೀಕರೂ,ರಾಜಸ್ತೋತ್ರನಿರತರಾದ ರಾಜಸಗುಣದವರೂ, ಕ್ರೂರಧ್ವನಿಗಳಿಂದ ಗರ್ಜಿಸುತ್ತಲಿರುವ ತಾಮಸಗುಣದವರೂ ಕೂಡ ಇದ್ದರು ಎಂಬ ಆಶಯವುವ್ಯಕ್ತವಾಗುತ್ತದೆ.

ಮೂ ॥ ದೀಕ್ಷಿತಾನ್ಜಟಿಲಾನ್ಮುಂಡಾನ್ಗೋಜಿನಾಂಬರವಾಸಸಃ ।
ದರ್ಭಮುಷ್ಟಿಪ್ರಹರಣಾ ನಗ್ನಿಕುಂಡಾಯುಧಾಂಸ್ತಥಾ ॥೧೬॥
ಕೂಟಮುದ್ಗರಪಾಣೀಂಶ್ಚ ದಂಡಾಯುಧಧರಾನಪಿ ।
ಏಕಾಕ್ಷಾನೇಕಕರ್ಣಾಂಶ್ಚ ಲಂಬೋದರಪಯೋಧರಾನ್ ॥೧೭॥

**ಪದಚ್ಛೇದ**

ದೀಕ್ಷಿತಾನ್, ಜಟಿಲಾನ್, ಮುಂಡಾನ್, ಗೋಜಿನಾಂಬರವಾಸಸಃ, ದರ್ಭಮುಷ್ಟಿಪ್ರಹರಣಾನ್, ಅಗ್ನಿಕುಂಡಾಯುಧಾನ್, ತಥಾ ॥೧೬॥

ಕೂಟಮುದ್ಗರಪಾಣೀನ್ ಚ, ದಂಡಾಯುಧಧರಾನ್, ಅಪಿ, ಏಕಾಕ್ಷಾನ್, ಏಕಕರ್ಣಾನ್, ಲಂಬೋದರಪಯೋಧರಾನ್ ॥೧೭॥

**ಅನ್ವಯ**

ಸಃ ದೀಕ್ಷಿತಾನ್, ಜಟಿಲಾನ್, ಮುಂಡಾನ್, ಗೋಜಿನಾಂಬರವಾಸಸಃ, ದರ್ಭಮುಷ್ಟಿಪ್ರಹರಣಾನ್, ತಥಾ, ಅಗ್ನಿಕುಂಡಾಯುಧಾನ್, ದದರ್ಶ ॥೧೬॥

(ಸಃ) ಕೂಟಮುದ್ಗರಪಾಣೀನ್-ದಂಡಾಯುಧಧರಾನ್, ಏಕಾಕ್ಷಾನ್, ಏಕಕರ್ಣಾನ್, ಅಪಿ ಚ ಲಂಬೋದರಪಯೋಧರಾನ್, ದದರ್ಶ ॥೧೭॥

ಸಃ-ಆ ಮಾರುತಿಯು, ದೀಕ್ಷಿತಾನ್-ದೀಕ್ಷಾಬದ್ಧರಾದಂಥಾವರನ್ನೂ, ಜಟಿಲಾನ್-ಜಟಾಧಾರಿಗಳಾದಂಥಾ ಜನಗಳನ್ನೂ, ಮುಂಡಾನ್-ಕ್ಷೌರಮಾಡಿಸಿಕೊಂಡಿರುವರನ್ನೂ, ಗೋಜಿನಾಂಬರವಾಸಸಃ-ವೃಷಭಚರ್ಮರೂಪವಾದ ವಸ್ತ್ರಧಾರಿಗಳನ್ನೂ, ದರ್ಭಮುಷ್ಟಿಪ್ರಹರಣಾನ್-ಪವಿತ್ರವಾದದರ್ಭೆಗಳನ್ನೂ ಮುಷ್ಟಿಗಳಲ್ಲಿಹಿಡಿದುಕೊಂಡು ಅವುಗಳನ್ನೇ ಆಯುಧಗಳನ್ನಾಗಿ ಭಾವಿಸುತಲಿರುವ ಜನಗಳನ್ನೂ, ತಥಾ-ಹಾಗಿಯೇ, ಅಗ್ನಿಕುಂಡಾಯುಧಾನ್-ಅಗ್ನಿಕುಂಡಗಳೇ ಆಯುಧಗಳಾಗಿ ಉಳ್ಳವರನ್ನೂ, ದದರ್ಶ-ನೋಡಿದನು ॥೧೬॥

(ಸಃ) ಆ ಮಾರುತಿಯು, ಕೂಟ-ಚಮಟಿಕೆಗಳೂ, ಮುದ್ಗರ-ಹಾರೆಗಳು ಇವುಗಳೇ, ಪಾಣೀನ್-ಹಸ್ತಗಳಲ್ಲಿ ಉಳ್ಳಂಥಾ, ದಂಡಾಯುಧಧರಾನ್-ದಂಡಾಯುಧಗಳನ್ನು ಧರಿಸತಕ್ಕವರನ್ನೂ, ಏಕಾಕ್ಷಾನ್-ಒಂದುಕಣ್ಣುಳ್ಳವರನ್ನೂ, ಏಕಕರ್ಣಾನ್-ಒಂದುಕಿವಿಯುಳ್ಳವರನ್ನೂ, ಅಪಿಚ ಮತ್ತು, ಲಂಬೋದರಪಯೋಧರಾನ್-ಜೋಲಾಡುತ್ತಿರುವ ಹೊಟ್ಟೆಗಳೂ ಸ್ತನಗಳೂ ಉಳ್ಳಂಥಾ ರಾಕ್ಷಸರನ್ನು, ದದರ್ಶ-ನೋಡಿದನು ॥೧೭॥

ಪ್ರೀತಿಪಡಿಸುವ ನಿಮಿತ್ತವಾಗಿ ಆತನನ್ನು ಸ್ತುತಿಗೊಳ್ಳುತ್ತಿರುವ ಜನಗಳನ್ನೂ ಮತ್ತೆಕೆಲವುಕಡೆ ಗಂಭೀರಗಳಾದ ಮೇಘಗಳಂತೆ ಗರ್ಜಿಸುತ್ತಲಿರುವ ರಾಕ್ಷಸ ಮಂಡಲಿಯನ್ನೂ ನೋಡುವನಾದನು॥೧೪॥

ಆ ಲಂಕಾಪಟ್ಟಣದಲ್ಲಿ ರಾಜರಸ್ತೆಯನ್ನು ವ್ಯಾಪಿಸಿಕೊಂಡು ಇದ್ದ ಅನೇಕ ರಾಕ್ಷಸ ಸೈನ್ಯವನ್ನೂ, ನಗರದಮಧ್ಯಭಾಗದಲ್ಲಿ ಕಾವಲಾಗಿಟ್ಟಿದ್ದ ಸೈನಿಕರನ್ನೂ, ರಾವಣನ ಅನೇಕಾನೇಕ ದೂತರನ್ನೂ ನೋಡುವನಾದನು ॥೧೫॥

Funding: Tattva Heritage and IKS-MoE. Digitization: eGangotri.



ಮೂ ॥ ಕರಾಳಾನ್ ಭುಗ್ನವಕ್ತ್ರಾಂಶ್ಚ ವಿಕಟಾನ್ವಾಮನಾಂಸ್ತಥಾ ।
ಧನ್ವಿನಃ ಖಡ್ಗಿನಶ್ಚೈವ ಶತಘ್ನೀಮುಸಲಾಯುಧಾನ್ ॥೧೮॥

| ಪದಚ್ಛೇದ | ಅನ್ವಯ |
| --- | --- |
| ಕರಾಳಾನ್, ಭುಗ್ನವಕ್ತ್ರಾನ್, ಚ, ವಿಕಟಾನ್ ವಾಮನಾನ್, ತಥಾ, ಧನ್ವಿನಃ, ಖಡ್ಗಿನಃ, ಚ, ಏವ, ಶತಘ್ನೀಮುಸಲಾಯುಧಾನ್ ೧೮॥ | (ಸಃ) ಕರಾಳಾನ್, ಭುಗ್ನವಕ್ತ್ರಾನ್, ವಿಕಟಾನ್, ವಾಮನಾನ್, ತಥಾ, ಧನ್ವಿನಃ, ಭುಗ್ನವಕ್ತ್ರಾನ್, ವಿಕಟಾನ್, ವಾಮನಾನ್, ತಥಾ, ಧನ್ವಿನಃ, ಖಡ್ಗಿನಃ, ಶತಘ್ನೀಮುಸಲಾಯುಧಾಂಶ್ಚ, ದದರ್ಶ ॥೧೮॥ |

ಸಃ-ಆ ಮಾರುತಿಯು, ಕರಾಳಾನ್-ಕ್ರೂರರಾದ, ಭುಗ್ನವಕ್ತ್ರಾನ್-ವಕ್ರವಾಗಿರುವಮುಖವುಳ್ಳವರನ್ನೂ, ವಿಕಟಾನ್-ವ್ಯತ್ಯಸ್ತಗಳಾದ ಅಂಗಗಳುಳ್ಳವರನ್ನೂ, ವಾಮನಾನ್-ಗುಜ್ಜಾರಿಗಳನ್ನೂ, ತಥಾ-ಹಾಗೆಯೇ, ಧನ್ವಿನಃ-ಧನುರ್ಧಾರಿಗಳನ್ನೂ, ಖಡ್ಗಿನಃ-ಖಡ್ಗಧಾರಿಗಳನ್ನೂ, ಶತಘ್ನೀಮುಸಲಾಯುಧಾಂಶ್ಚ-ಫಿರಂಗಿಗಳೂ ವನಿಕೆಗಳೂ ಇವುಗಳೇ ಆಯುಧಗಳಾಗಿರುವವರನ್ನೂ ದದರ್ಶ-ನೋಡಿದನು ॥೧೮॥

ಮಾರುತಿಯು ಆ ಲಂಕಾನಗರದ ಮಹಾಪಥದಲ್ಲಿ, ಯೋಗದೀಕ್ಷೆಯುಳ್ಳ ಕೆಲವರನ್ನೂ, ಜಟಾಧಾರಿಗಳಾಗಿರುವ ಕೆಲವರನ್ನೂ, ಕ್ಷುರಕರ್ಮವಾಡಿಸಿಕೊಂಡು ವ್ರತನಿಷ್ಠರಾದವರನ್ನೂ, ಏತ್ತಿನಚರ್ಮವನ್ನು ಧರಿಸಿಕೊಂಡಿರುವ ಕೆಲವರನ್ನೂ, ದರ್ಭೆಗಳನ್ನು ಮುಷ್ಟಿಗಳಲ್ಲಿ ಸರ್ವದಾಧರಿಸಿಕೊಂಡು ದುಷ್ಟನಿಗ್ರಹ ಶಿಷ್ಟಪರಿಪಾಲನೆಗಾಗಿ ಅನುಷ್ಠಾನಕ್ರಮಗಳಲ್ಲಿರತತ್ಕವರನ್ನೂ, ಶತ್ರುಮರಣಕ್ಕಾಗಿ ಹೋಮಾದಿಗಳನ್ನು ಮಾಡುವನಿಮಿತ್ತದಿಂದ ಅಗ್ನಿಕುಂಡಗಳ ಬಳಿಯಲ್ಲಿ ಸಂತತವಾಗಿ ವಾಸಿಸುತಲಿರುವವರನ್ನು ನೋಡಿದನು ॥೧೬॥

ಆ ಲಂಕಾನಗರದಲ್ಲಿ ಸಂಚರಿಸುತಲಿರುವಾಗ್ಯೆ ಮಾರುತಿಯು ಅತ್ಯದ್ಭುತರಾಗಿಯೂ ನಾನಾವಿಧಗಳಾದ ಆಯುಧಪಾಣಿಗಳಾಗಿಯೂ, ವಿಕೃತಾನನರಾಗಿಯೂ, ಏಕನೇತ್ರಗಳುಳ್ಳವರಾಗಿಯೂ, ಏಕಕರ್ಣರಾಗಿಯೂ, ಲಂಬೋದರರಾಗಿಯೂ, ಲಂಬಕುಚರಾಗಿಯೂ ಇರುವ ನಾನಾವಿಧ ವಿಕಾರಗಳನ್ನು ಹೊಂದಿರುವ ಆ ರಾಕ್ಷಸರನ್ನು ನೋಡುವನಾದನು ॥೧೭॥

ಮಾರುತಿಯು ಸಂಚರಿಸುತಲಿರುವಾಗ್ಯೆ ಅತಿ ಕ್ರೂರಕರ್ಮಿಗಳಾದ ಕೆಲವರು ರಾಕ್ಷಸರನ್ನೂ, ಸೊಟ್ಟಬಾಯಿನ ಕೆಲವರನ್ನೂ, ವಿಕಾರ ಶರೀರಿಗಳಾದ ಕೆಲವರನ್ನೂ, ಗುಜ್ಜಾರಿಗಳನ್ನೂ, ಧನುರ್ಧಾರಿಗಳನ್ನೂ ಖಡ್ಗಧಾರಿಗಳನ್ನೂ, ಧನುರ್ಧಾರಿಗಳನ್ನೂ, ಫಿರಂಗಿಗಳೂ ವನಿಕೆಗಳೂ ಮುಂತಾದ ಆಯುಧಗಳನ್ನು ಧರಿಶಿರತಕ್ಕವರನ್ನೂ ನೋಡಿದನು ॥೧೮॥

ಮೂ ॥ ಪರಿಘೋತ್ತಮಹಸ್ತಾಂಶ್ಚ ವಿಚಿತ್ರಕವಚೋಜ್ಜ್ವಲಾನ್ ।
ನಾತಿಸ್ಥೂಲಾನ್ನಾತಿಕೃಶಾನ್ ನಾತಿದೀರ್ಘಾತಿಹ್ರಸ್ವಕಾನ್ ॥೧೯॥
ನಾತಿಗೌರಾನ್ನಾತಿಕೃಷ್ಣಾನ್ ನಾತಿಕುಬ್ಜಾನ್ನವಾಮನಾನ್ ।
ವಿರೂಪಾನ್ಬಹುರೂಪಾಂಶ್ಚ ಸುರೂಪಾಂಶ್ಚ ಸುವರ್ಚಸಃ ॥೨೦॥

**ಪದಚ್ಛೇದ**

ಪರಿಘೋತ್ತಮಹಸ್ತಾನ್, ಚ, ವಿಚಿತ್ರ ಕವಚೋಜ್ಜ್ವಲಾನ್, ನಾತಿಸ್ಥೂಲಾನ್, ನಾತಿಕೃಶಾನ್ ನಾತಿದೀರ್ಘಾತಿಹ್ರಸ್ವಕಾನ್ ॥೧೯॥

ನಾತಿಗೌರಾನ್, ನಾತಿಕೃಷ್ಣಾನ್, ನಾತಿಕುಬ್ಜಾನ್, ನವಾಮನಾನ್, ವಿರೂಪಾನ್, ಬಹುರೂಪಾನ್, ಚ, ಸುರೂಪಾನ್, ಚ, ಸುವರ್ಚಸಃ ॥೨೦॥

**ಅನ್ವಯ**

ಸಃ ಪರಿಘೋತ್ತಮಹಸ್ತಾನ್, ವಿಚಿತ್ರಕವಚೋಜ್ಜ್ವಲಾನ್, ನಾತಿಸ್ಥೂಲಾನ್, ನಾತಿಕೃಶಾನ್, ನಾತಿದೀರ್ಘಾತಿಹ್ರಸ್ವಕಾನ್, ದದರ್ಶ ॥೧೯॥

(ಸಃ) ನಾತಿಗೌರಾನ್, ನಾತಿಕೃಷ್ಣಾನ್, ನಾತಿಕುಬ್ಜಾನ್, ನವಾಮನಾನ್, ವಿರೂಪಾನ್, ಬಹುರೂಪಾನ್, ಸುರೂಪಾನ್, ಸುವರ್ಚಸಶ್ಚ ದದರ್ಶ ॥೨೦॥

ಸಃ-ಆ ಮಾರುತಿಯು, ಪರಿಘೋತ್ತಮಹಸ್ತಾನ್-ಪರಿಘವೆಂಬ ಉತ್ತಮವಾದಾಯುಧವನ್ನು ಕೈಯ್ಯಲ್ಲಿಧರಿಸಿರುವವರನ್ನೂ, ವಿಚಿತ್ರಕವಚೋಜ್ಜ್ವಲಾನ್-ನಾನಾವಿಧಗಳಾದ ಕವಚವೊದಲಾದ ಅಂಗರಕ್ಷೆಗಳಿಂದ ಪ್ರಕಾಶಿಸುತಲಿರುವವರನ್ನೂ, ನಾತಿಸ್ಥೂಲಾನ್-ಬಹಳ ದಪ್ಪವಾಗದಿರುವವರನ್ನೂ, ನಾತಿಕೃಶಾನ್-ಬಹಳಸಣ್ಣಗೆ ಇಲ್ಲದಿರುವವರನ್ನೂ, ನಾತಿದೀರ್ಘಾತಿಹ್ರಸ್ವಾನ್-ಬಹಳ ಉದ್ದವಾಗಿಯೂ ಬಹಳತುಂಡಾಗಿಯೂ ಇಲ್ಲದಿರುವವರನ್ನೂ, ದದರ್ಶ-ನೋಡಿದನು ॥೧೯॥

ಸಃ-ಆ ಮಾರುತಿಯು, ನಾತಿಗೌರಾನ್-ಬಹಳಬೆಳ್ಳಗಿಲ್ಲದಿರುವವರನ್ನೂ, ನಾತಿಕೃಷ್ಣಾನ್-ಬಹಳ ಕಪ್ಪಗಿಲ್ಲದಿರುವವರನ್ನೂ, ನಾತಿಕುಬ್ಜಾನ್-ಬಹಳಗೂನು ಇಲ್ಲದೆ ಇರತಕ್ಕವರನ್ನೂ, ನವಾಮನಾನ್-ಗುಜ್ಜಾರಿಯಾಗದಿರುವವರನ್ನೂ, ವಿರೂಪಾನ್- ವಿಕೃತರೂಪರನ್ನೂ, ಬಹುರೂಪಾನ್-ನಾನಾವಿಧಗಳಾದ ಆಕೃತಿಗಳುಳ್ಳವರನ್ನೂ, ಸುರೂಪಾನ್-ರಮ್ಯಗಳಾದ ಆಕೃತಿಯುಳ್ಳವರನ್ನೂ, ಸುವರ್ಚಸಶ್ಚ-ಒಳ್ಳೇವರ್ಚಸ್ವಿಗಳಾಗಿರತಕ್ಕವರನ್ನೂ, ದದರ್ಶ-ನೋಡಿದನು ॥೨೦॥

ಲಂಕಾ ಸಂಚಾರಕಾಲದಲ್ಲಿ ಮಾರುತಿಯು ಕೈಯಿಗಳಲ್ಲಿ ಉತ್ತಮಗಳಾದ ಪರಿಘಾಯುಧಗಳನ್ನು ಧರಿಸಿಕೊಂಡಿರುವವರನ್ನೂ ನಾನಾವಿಧಗಳಾದ ಕವಚಗಳನ್ನು ಧರಿಸಿಕೊಂಡಿರುವವರನ್ನೂ ಬಹಳ ದಪ್ಪವೂ ಅಲ್ಲದೆ ಬಹಳ ಸಣ್ಣವೂ ಅಲ್ಲದೆ ಸಮವಿಭಕ್ತಾವಯವಗಳುಳ್ಳವರನ್ನೂ, ಅತಿಉದ್ದವಲ್ಲದೆಯೂ, ಅತಿಮೋಟರಲ್ಲದೆಯೂ ಇರತಕ್ಕ ರಾಕ್ಷಸರನ್ನೂ ನೋಡುವವನಾದನು ॥೧೯॥.

ಆ ಲಂಕಾಸಂಚಾರಕಾಲದಲ್ಲಿ ಮಾರುತಿಯು ಮಹಾಮಾರ್ಗದಲ್ಲಿ ಬಹಳ ಬೆಳ್ಳಗಿರದೆಯೂ ಬಹಳ ಕಪ್ಪಾಗಿರದೆಯೂ, ಅತಿ ಕುಳ್ಳಾಗಿರದೆಯೂ, ಅತಿ ಕರಾಳರೂಪರಲ್ಲ

ಮೂ ॥ ಧ್ವಜೀನ್ಪತಾಕಿನಶ್ಚೈವ ದದರ್ಶವಿವಿಧಾಯುಧಾನ್ ।
ಶಕ್ತಿವೃಕ್ಷಾಯುಧಾಂಶ್ಚೈವ ಪಟ್ಟಸಾಶನಿಧಾರಿಣಃ ॥೨೧॥
ಕ್ಷೇಪಣೀಪಾಶಹಸ್ತಾಂಶ್ಚ ದದರ್ಶಸಮಹಾಕಪಿಃ ।
ಸ್ರಗ್ವಿಣಸ್ತ್ವನುಲಿಪ್ತಾಂಶ್ಚ ವರಾಭರಣಭೂಷಿತಾನ್ ॥೨೨॥

| ಪದಚ್ಛೇದ | ಅನ್ವಯ |
| --- | --- |
| ಧ್ವಜೀನ್, ಪತಾಕಿನಃ, ಚ, ಏವ, ದದರ್ಶ, ವಿವಿಧಾಯುಧಾನ್, ಶಕ್ತಿವೃಕ್ಷಾಯುಧಾನ್, ಚ, ಏವ, ಪಟ್ಟಸಾಶನಿಧಾರಿಣಃ ॥೨೧॥ | ಧ್ವಜೀನ್ (ಧ್ವಜಿನಃ), ಪತಾಕಿನಃ, ವಿವಿಧಾಯುಧಾನ್, ಶಕ್ತಿವೃಕ್ಷಾಯುಧಾನ್, ಪಟ್ಟಸಾಶನಿಧಾರಿಣಶ್ಚ, ದದರ್ಶ ॥೨೧॥ |
| ಕ್ಷೇಪಣೀಪಾಶಹಸ್ತಾನ್, ಚ, ದದರ್ಶ, ಸಃ, ಮಹಾಕಪಿಃ, ಸ್ರಗ್ವಿಣಃ, ತು, ಅನುಲಿಪ್ತಾನ್, ಚ ವರಾಭರಣಭೂಷಿತಾನ್ ॥೨೨॥ | ಸಃ ಮಹಾಕಪಿಃ ಕ್ಷೇಪಣೀಪಾಶಹಸ್ತಾನ್, ಸ್ರಗ್ವಿಣಃ, ಅನುಲಿಪ್ತಾನ್, ವರಾಭರಣಭೂಷಿತಾನ್ ದದರ್ಶ ॥೨೨॥ |

ಸಃ-ಆ ಮಾರುತಿಯು, ಧ್ವಜೀನ್-ದೊಡ್ಡನಿಶಾನೆಯುಳ್ಳವರನ್ನೂ, ಪತಾಕಿನಃ-ವೈಜಯಂತಿಯುಳ್ಳವರನ್ನೂ, ವಿವಿಧಾಯುಧಾನ್-ನಾನಾವಿಧಾಯುಧಾನ್-ನಾನಾವಿಧಗಳಾದ ಆಯುಧಗಳುಳ್ಳವರನ್ನೂ, ಶಕ್ತಿವೃಕ್ಷಾಯುಧಾನ್-ಶಕ್ತ್ಯಾಯುಧಗಳೂ ವೃಕ್ಷಾಯುಧಗಳೂ ಉಳ್ಳವರನ್ನೂ, ಪಟ್ಟಸಾಶನಿಧಾರಿಣಶ್ಚ-ದೊಡ್ಡಕತ್ತಿಗಳನ್ನೂ ವಜ್ರಾಯುಧಗಳನ್ನೂ ಧರಿಸಿಕೊಂಡಿರುವವರನ್ನೂ ನೋಡುವನಾದನು॥

ಸಃ ಮಹಾಕಪಿಃ-ವಾನರಶ್ರೇಷ್ಠನಾದ ಆ ಹನುಮಂತನು, ಕ್ಷೇಪಣೀಪಾಶಹಸ್ತಾನ್-ಹಡಗುನಡಿಸುವದಂಡವೂ ಮತ್ತು ಹಗ್ಗಗಳೂ ಇವುಗಳನ್ನು ಹಸ್ತಗಳಲ್ಲಿ ಹಿಡಿದುಕೊಂಡಿರುವರನ್ನೂ, ಸ್ರಗ್ವಿಣಃ-ಪುಷ್ಪಮಾಲಿಕೆಗಳನ್ನು ಧರಿಸಿಕೊಂಡಿರುವರನ್ನು, ಅನುಲಿಪ್ತಾನ್-ಗಂಧಾನುಲೇಪನಗಳನ್ನು ಮಾಡಿಕೊಂಡಿರುವರನ್ನೂ ವರಾಭರಣ ಭೂಷಿತಾನ್-ಶ್ರೇಷ್ಠಗಳಾದ ಆಭರಣಗಳನ್ನು ಧರಿಸಿಕೊಂಡಿರುವರನ್ನೂ ದದರ್ಶ-ನೋಡುವನಾದನು ॥೨೨॥

ಡೆಯೂ, ಇರುವ ಮತ್ತು ಶೋಭನಕಾಂತಿಯುಳ್ಳ ಸುಂದರಾಕೃತಿಗಳಾದ ಅನೇಕರನ್ನು ನೋಡಿದವನಾದನು ॥೨೦॥

ತತ್ಕಾಲದಲ್ಲಿ ಆ ಮಾರುತಿಯು ಆ ಲಂಕಾಮಹಾನಗರದಲ್ಲಿ, ದೊಡ್ಡನಿಶಾನೆಯುಳ್ಳವರನ್ನೂ, ವೈಜಯಂತಿಯುಳ್ಳವರನ್ನೂ, ಶಕ್ತ್ಯಾಯುಧ, ವಜ್ರಾಯುಧ ಖಡ್ಗ ಪಟ್ಟಸ ಮೊದಲಾದ ಅನೇಕಾನೇಕ ಮಹಾಯುಧಧಾರಿಗಳಾದ ರಾಕ್ಷಸರನ್ನು ನೋಡುವನಾದನು ॥೨೧॥

ಆ ಮಾರುತಿಯು ಲಂಕಾನಗರಿಯಲ್ಲಿ ಸಂಚರಿಸುತಲಿರುವಾಗ್ಯೆ ಹಸ್ತಗಳಲ್ಲಿ ಹಗ್ಗ ಮತ್ತು ದೊಡ್ಡ ಕೋಲುಗಳು ಇವುಗಳನ್ನು ಧರಿಸಿಕೊಂಡು ಭಯಂಕರರಾಗಿರತಕ್ಕ ಜನಗಳನ್ನೂ, ದಿವ್ಯಗಂಧಗಳನ್ನುಶರೀರಕ್ಕೆ ಅನುಲೇಪನಮಾಡಿಕೊಂಡು, ದಿವ್ಯಪುಷ್ಪ

ಮೂ ॥ ನಾನಾವೇಷಸಮಾಯುಕ್ತಾನ್ ಯಥಾಸ್ವೈರಗತಾನ್ ಬಹೂನ್ ।
ತೀಕ್ಷ್ಣಶೂಲಧರಾಂಶ್ಚೈವ ವಜ್ರಿಣಶ್ಚ ಮಹಾಬಲಾನ್ ॥೨೩॥
ಶತಸಾಹಸ್ರಮವ್ಯಗ್ರಮಾರಕ್ಷಂ ಮಧ್ಯಮಂ ಕಪಿಃ ।
ರಕ್ಷೋಧಿಪತಿನಿರ್ದಿಷ್ಟಂ ದದರ್ಶಾಂತಃ ಪುರಾಗ್ರತಃ ॥೨೪॥

ಪದಚ್ಛೇದ

ನಾನಾವೇಷಸಮಾಯುಕ್ತಾನ್, ಯಥಾಸ್ವೈರಗತಾನ್, ಬಹೂನ್, ತೀಕ್ಷ್ಣಶೂಲಧರಾನ್, ಚ, ಏವ, ವಜ್ರಿಣಃ, ಚ, ಮಹಾಬಲಾನ್ ॥೨೩॥
ಶತಸಾಹಸ್ರಂ, ಅವ್ಯಗ್ರಂ, ಆರಕ್ಷಂ, ಮಧ್ಯಮಂ, ಕಪಿಃ, ರಕ್ಷೋಧಿಪತಿನಿರ್ದಿಷ್ಟಂ, ದದರ್ಶ ಅಂತಃಪುರಾಗ್ರತಃ ॥೨೪॥

ಅನ್ವಯ

ಸಃ ನಾನಾವೇಷಸಮಾಯುಕ್ತಾನ್, ಯಥಾಸ್ವೈರಗತಾನ್, ಬಹೂನ್, ತೀಕ್ಷ್ಣಶೂಲಧರಾನ್, ಚ, ಏವ, ವಜ್ರಿಣಃ, ಚ, ಮಹಾಬಲಾನ್ ॥೨೩॥
ಕಪಿಃ, ಶತಸಾಹಸ್ರಂ, ಅವ್ಯಗ್ರಂ, ಅಂತಃಪುರಾಗ್ರತಃ, ರಕ್ಷೋಧಿಪತಿನಿರ್ದಿಷ್ಟಂ, ಮಧ್ಯಮಂ, ಆರಕ್ಷಂ, ದದರ್ಶ ॥೨೪॥

ಸಃ-ಆ ಮಾರುತಿಯು, ನಾನಾವೇಷಸಮಾಯುಕ್ತಾನ್-ಅನೇಕವಿಧಗಳಾದವೇಷಗಳಿಂದ ಕೂಡಿಕೊಂಡಿರತಕ್ಕ ಜನಗಳನ್ನೂ, ಯಥಾಸ್ವೈರಗತಾನ್-ಸ್ವಚ್ಛಂದಗಮನಗಳುಳ್ಳ ಜನರನ್ನೂ, ತೀಕ್ಷ್ಣಶೂಲಧರಾನ್-ಹರಿತಗಳಾದ ಶೂಲಾಯುಧಗಳನ್ನು ಧರಿಸಿಕೊಂಡಿರುವರನ್ನೂ, ವಜ್ರಿಣಃ-ವಜ್ರಾಯುಧಗಳನ್ನು ಧರಿಸಿಕೊಂಡಿರುವ ಜನಗಳನ್ನೂ, ಮಹಾಬಲಾನ್-ಅತ್ಯಂತಬಲಶಾಲಿಗಳಾದವರನ್ನೂ, ದದರ್ಶ-ನೋಡಿದನು ॥೨೩॥

ಕಪಿಃ-ಆ ಮಾರುತಿಯು, ಶತಸಾಹಸ್ರಂ-ಲಕ್ಷಸಂಖ್ಯೆಯುಳ್ಳ, ಅವ್ಯಗ್ರಂ-ಏಕಾಗ್ರಚಿತ್ತವಾದ, ಅಂತಃಪುರಾಗ್ರತಃ-ನಗರಮಧ್ಯಪ್ರದೇಶದ ಮುಂಭಾಗದಲ್ಲಿರುವ, ರಕ್ಷೋಧಿಪತಿನಿರ್ದಿಷ್ಟಂ-ರಾವಣಾಸುರನ ಆಜ್ಞೆಯಿಂದ ಇರಿಸಲ್ಪಟ್ಟಿರುವ, ಮಧ್ಯಮಂ-ಮಧ್ಯದೇಶದಲ್ಲಿರುವ, ಆರಕ್ಷಂ-ಮೂಲಬಲಸೈನ್ಯವನ್ನು ದದರ್ಶ-ನೋಡಿದನು ॥೨೪॥

ಮಾಲಿಕೆಗಳನ್ನು ಧರಿಸಿಕೊಂಡು ದಿವ್ಯಾಭರಣ ಭೂಷಿತರಾಗಿರತಕ್ಕ ಜನರನ್ನೂ ದರ್ಶನಮಾಡುವವನಾದನು ॥೨೨॥

ಆ ಮಾರುತಿಯು ಲಂಕಾಪುರದಲ್ಲಿ ಸಂಚರಿಸುತಲಿರುವಾಗ್ಯೆ ನಾನಾ ವೇಷಧಾರಿಗಳಾಗಿಯೂ ನಾನಾವಿಧವಾಗಿ ಸ್ವಚ್ಛಂದವೃತ್ತಿಯಿಂದ ಗಮನಾಗಮನವುಳ್ಳವರಾಗಿಯೂ ತೀಕ್ಷ್ಣಗಳಾದ ಶೂಲಾಯುಧಗಳನ್ನು ಧರಿಸಿದವರಾಗಿಯೂ ಇದ್ದ ಅನೇಕಾನೇಕ ರಾಕ್ಷಸರನ್ನು ಅವಲೋಕನಮಾಡಿದವನಾದನು ॥೨೩॥

ಆ ಮಾರುತಿಯು ನೂರಾರು ಸಾವಿರಮಂದಿ ಸೈನಿಕರು ಆ ಪಟ್ಟಣದ ಮಧ್ಯಭಾಗದಲ್ಲಿ ನಿರಂತರದಲ್ಲೂ ಏಕಾಗ್ರಚಿತ್ತರಾಗಿ ರಾವಣಾಸುರನ ಆಜ್ಞೆಯಿಂದ ಕಾದುಕೊಂಡಿರುವ ಮೂಲಬಲಸೈನ್ಯವನ್ನು ನೋಡಿದನು ॥೨೪॥

ಸತದಾತದ್ಗೃಹಂದೃಷ್ಟ್ವಾ ಮಹಾಹಾಟಕತೋರಣಂ ।
ರಾಕ್ಷಸೇಂದ್ರಸ್ಯವಿಖ್ಯಾತ ಮದ್ರಿಮೂರ್ಧ್ನಿ ಪ್ರತಿಷ್ಠಿತಂ ॥
ಪುಂಡರೀಕಾವತಂಸಾಭಿಃ ಪರಿಘಾಭಿರಲಂಕೃತಂ ।
ಪ್ರಾಕಾರಾವೃತಮತ್ಯರ್ಥಂ ದದರ್ಶ ಸಮಹಾಕಪಿಃ ॥೨೫-೨೬॥

**ಪದಚ್ಛೇದ**

ಸಃ, ತದಾ, ತದ್ಗೃಹಂ, ದೃಷ್ಟ್ವಾ, ಮಹಾಹಾಟಕತೋರಣಂ, ರಾಕ್ಷಸೇಂದ್ರಸ್ಯ, ವಿಖ್ಯಾತಂ, ಅದ್ರಿಮೂರ್ಧ್ನಿ, ಪ್ರತಿಷ್ಠಿತಂ, ಪುಂಡರೀಕಾವತಂಸಾಭಿಃ, ಪರಿಘಾಭಿಃ, ಅಲಂಕೃತಂ, ಪ್ರಾಕಾರಾವೃತಂ, ಅತ್ಯರ್ಥಂ, ದದರ್ಶ, ಸಃ, ಮಹಾಕಪಿಃ ॥೨೫॥

**ಅನ್ವಯ**

ಸಃ, ಮಹಾಕಪಿಃ, ಮಹಾಹಾಟಕತೋರಣಂ, ಅದ್ರಿಮೂರ್ಧ್ನಿ ಪ್ರತಿಷ್ಠಿತಂ, ಪುಂಡರೀಕಾವತಂಸಾಭಿಃ, ಪರಿಘಾಭಿಃ, ಅಲಂಕೃತಂ, ಪ್ರಾಕಾರಾವೃತಂ, ವಿಖ್ಯಾತಂ, ರಾಕ್ಷಸೇಂದ್ರಸ್ಯ, ತದ್ಗೃಹಂ, ದೃಷ್ಟ್ವಾ ತದಾ, ಅತ್ಯರ್ಥಂ, ದದರ್ಶ ॥೨೫॥

**ಅರ್ಥ,**

ಸಃ ಮಹಾಕಪಿಃ-ಆ ಮಾರುತಿಯು, ಮಹಾಹಾಟಕತೋರಣಂ-ದೊಡ್ಡದಾದ ಸುವರ್ಣತೋರಣಗಳುಳ್ಳ, ಅದ್ರಿಮೂರ್ಧ್ನಿ-ಲಂಬಾಚಲದ ಶಿಖರಭಾಗದಲ್ಲಿ, ಪ್ರತಿಷ್ಠಿತಂ-ನಿರ್ಮಿಸಲ್ಪಟ್ಟಿರುವ, ಪುಂಡರೀಕಾವತಂಸಾಭಿಃ-ಶುಭ್ರಕಮಲಗಳೇ ಭೂಷಣವಾಗಿ ಉಳ್ಳ, ಪರಿಘಾಭಿಃ-ಅಗಳುಗಳಿಂದಲೂ, ಅಲಂಕೃತಂ-ಭೂಷಿತವಾದ, ಪ್ರಾಕಾರಾವೃತಂ-ಕೋಟೆಯಿಂದ ಸುತ್ತಿಕೊಳ್ಳಲ್ಪಟ್ಟ, ವಿಖ್ಯಾತಂ-ಪ್ರಸಿದ್ಧವಾದ, ರಾಕ್ಷಸೇಂದ್ರಸ್ಯ-ರಾವಣಾಸುರನ, ತದ್ಗೃಹಂ-ಆ ಮನೆಯನ್ನು, ದೃಷ್ಟ್ವಾ-ನೋಡಿ, ಸ್ಥಿತಃ-ನಿಂತವನಾಗಿ, ಅತ್ಯರ್ಥಂ-ಅತಿಶಯವಾಗಿ, ದದರ್ಶ-ವೀಕ್ಷಿಸಲು ಕುತೂಹಲವುಳ್ಳವನಾದನು ॥೨೫-೨೬॥

## ರಾಮಕಥಾ ರತ್ನಾಕರ.

ಆ ಮಾರುತಿಯು ಪರ್ವತಶಿಖರದಲ್ಲಿ ನಿರ್ಮಿತವಾಗಿಯೂ, ನಾನಾಸುವರ್ಣತೋರಣಗಳಿಂದ ಅಲಂಕರಿಸಲ್ಪಟ್ಟದ್ದಾಗಿಯೂ, ಬಿಳಿದಾವರೆ ಪುಷ್ಪಗಳಿಂದ ಕೂಡಿರುವ ಜಲಭರಿತಗಳಾದ ಅಗಳುಗಳಿಂದ ಸುತ್ತುವರಿಯಲ್ಪಟ್ಟದ್ದಾಗಿಯೂ ಇರುವ, ಸರ್ವಲೋಕಪ್ರಸಿದ್ಧವಾದ ಆ ರಾಕ್ಷಸೇಂದ್ರಭವನವನ್ನು ಅವಲೋಕನಮಾಡಿದ ಮಾತ್ರದಿಂದಲೇ ಹರ್ಷಯುಕ್ತನಾಗಿ ಅದನ್ನು ಪುನಃ ಪುನಃ ಅವಲೋಕಿಸಬೇಕೆಂದು ಕುತೂಹಲವುಳ್ಳವನಾದನು ॥೨೫-೨೬॥

ಮೂ ‖ ತ್ರಿವಿಷ್ಟಪನಿಭಂ ದಿವ್ಯಂ ದಿವ್ಯನಾದವಿನಾದಿತಮ್ ।
ವಾಜಿಹೇಷಿತಸಂಘುಷ್ಟಂ ನಾದಿತಂಭೂಷಣೈಸ್ತಥಾ ‖
ರಥೈರ್ಯಾನೈರ್ವಿಮಾನೈಶ್ಚ ತಥಾಹಯಗಜೈಶ್ಶುಭೈಃ ।
ವಾರಣೈಶ್ಚ ಚತುರ್ದಂತೈಶ್ಶ್ವೇತಾಭ್ರನಿಚಯೋಪಮೈಃ ‖
ಭೂಷಿತಂ ರುಚಿರದ್ವಾರಂ ಮತ್ತೈಶ್ಚಮೃಗಪಕ್ಷಿಭಿಃ ।
ರಕ್ಷಿತಂಸುಮಹಾವೀರ್ಯೈರ್ಯಾತುಧಾನೈಸ್ಸಹಸ್ರಶಃ ‖
ರಾಕ್ಷಸಾಧಿಪತೇರ್ಗುಪ್ತ ಮಾವಿವೇಶ ಗೃಹಂ ಕಪಿಃ ‖೨೭-೨೯‖

ತ್ರಿವಿಷ್ಟಪನಿಭಂ, ದಿವ್ಯಂ, ದಿವ್ಯನಾದವಿನಾದಿತಂ, ವಾಜಿಹೇಷಿತಸಂಘುಷ್ಟಂ, ನಾದಿತಂ, ಭೂಷಣೈಃ, ತಥಾ, ರಥಯಾನೈಃ, ವಿಮಾನೈಃ, ಚ, ತಥಾ, ಹಯಗಜೈಃ, ಶುಭೈಃ, ವಾರಣೈಃ, ಚ, ಚತುರ್ದಂತೈಃ, ಶ್ವೇತಾಭ್ರನಿಚಯೋಪಮೈಃ, ಭೂಷಿತಂ, ರುಚಿರದ್ವಾರಂ, ಮತ್ತೈಃ, ಚ, ಮೃಗಪಕ್ಷಿಭಿಃ, ರಕ್ಷಿತಂ, ಸುಮಹಾವೀರ್ಯೈಃ, ಯಾತುಧಾನೈಃ, ಸಹಸ್ರಶಃ, ರಾಕ್ಷಸಾಧಿಪತೇಃ, ಗುಪ್ತಂ, ಅವಿವೇಶ, ಗೃಹಂ, ಕಪಿಃ ‖೨೬-೨೭‖

ಕಪಿಃ, ದಿವ್ಯಂ, ತ್ರಿವಿಷ್ಟಪನಿಭಂ, ದಿವ್ಯನಾದವಿನಾದಿತಂ, ವಾಜಿಹೇಷಿತಸಂಘುಷ್ಟಂ, ತಥಾ, ಭೂಷಣೈಃ ನಾದಿತಂ, ರಥೈಃ ಯಾನೈಃ, ವಿಮಾನೈಶ್ಚ, ತಥಾ, ಶುಭೈಃ ಹಯಗಜೈಃ, ಚತುರ್ದಂತೈಃ ಶ್ವೇತಾಭ್ರನಿಚಯೋಪಮೈಃ ವಾರಣೈಶ್ಚ ಭೂಷಿತಂ, ಮತ್ತೈಃ ಮೃಗಪಕ್ಷಿಭಿಃ ರುಚಿರದ್ವಾರಂ, ಸುಮಹಾವೀರ್ಯೈಃ ಯಾತುಧಾನೈಃ, ರಕ್ಷಿತಂ, ಸಹಸ್ರಶಃ ಗುಪ್ತಂ, ರಾಕ್ಷಸಾಧಿಪತೇಃ, ಗೃಹಂ, ಆವಿವೇಶ ‖೨೬-೨೯‖

ಕಪಿಃ-ಆ ಮಾರುತಿಯು, ದಿವ್ಯಂ-ಸ್ವರ್ಗಲೋಕದಲ್ಲಿರುವದಕ್ಕೆ ಅರ್ಹನಾದ ತ್ರಿವಿಷ್ಟಪನಿಭಂ-ದೇವಲೋಕಕ್ಕೆ ಸಮನಾದ, ದಿವ್ಯನಾದವಿನಾದಿತಂ-ಶ್ರೇಷ್ಠಗಳಾದ ವೀಣಾದಿಧ್ವನಿಗಳಿಂದ ಶಬ್ದಾಯಮಾನವಾದ, ವಾಜಿಹೇಷಿತಸಂಘುಷ್ಟಂ-ಕುದುರೆಗಳ ಹೇಷಾಧ್ವನಿಗಳಿಂದ ವ್ಯಾಪ್ತವಾದ, ತಥಾ-ಹಾಗೆಯೇ, ಭೂಷಣೈಃ ಆಭರಣಗಳಿಂದ, ನಾದಿತಂ-ಧ್ವನಿತವಾದ, ರಥೈಃ-ರಥಗಳಿಂದಲೂ, ಯಾನೈಃ-ವಾಹನಗಳಿಂದಲೂ ವಿಮಾನೈಶ್ಚ-ವಿಮಾನಗಳಿಂದಲೂ, ತಥಾ-ಹಾಗೆಯೇ, ಶುಭೈಃ-ಶುಭಕರಗಳಾದ, ಹಯಗಜೈಃ-ಕುದುರೆಗಳೂ ಆನೆಗಳೂ ಇವುಗಳಿಂದಲೂ, ಚತುರ್ದಂತೈಃ-ನಾಲ್ಕುಕೊಂಬುಗಳುಳ್ಳ, ಶ್ವೇತಾಭ್ರನಿಚಯೋಪಮೈಃ-ಶುಭ್ರಗಳಾದ ಮೇಘಸಂಘಗಳೋ ಎಂಬಂತೆ ಕಾಣಿಸುವ, ವಾರಣೈಶ್ಚ-ಆನೆಗಳಿಂದಲೂ, ಭೂಷಿತಂ-ಅಲಂಕರಿಸಲ್ಪಟ್ಟ, ಮತ್ತೈಃ-ಮದಿಸಿರುವ, ಮೃಗಪಕ್ಷಿಭಿಃ-ಮೃಗಗಳೂ ಪಕ್ಷಿಗಳೂ ಇವುಗಳಿಂದ, ರುಚಿರದ್ವಾರಂ-ಮನೋಹರವಾದ ಬಾಗಿಲುಗಳುಳ್ಳ, ಸುಮಹಾವೀರ್ಯೈಃ-ಅತ್ಯಂತ ಪರಾಕ್ರಮಶಾಲಿಗಳಾದ, ಯಾತುಧಾನೈಃ-ರಾಕ್ಷಸರಿಂದ, ರಕ್ಷಿತಂ-ಸಂರಕ್ಷಿಸಲ್ಪಟ್ಟ, ಸಹಸ್ರಶಃ-ಸಹಸ್ರಪ್ರಕಾರವಾಗಿ, ಗುಪ್ತಂ-ಕಾಪಾಡಲ್ಪಟ್ಟ, ರಾಕ್ಷಸಾಧಿಪತೇಃ-ರಾವಣಾಸುರನ, ಗೃಹಂ-ಮನೆಯನ್ನು, ಆವಿವೇಶ-ಪ್ರವೇಶಮಾಡಿದನು ‖೨೭-೨೯

ಈ ಪ್ರಕಾರವಾಗಿ ಆ ಮಾರುತಿಯು ಸರ್ವಶ್ರೇಷ್ಠನಾಗಿಯೂ, ದೇವಲೋಕ

ಮೂ ॥ ಸಹೇಮ ಜಾಂಬೂನದಚಕ್ರವಾಳಂ ಮಹಾರ್ಹಮುಕ್ತಾಮಣಿ ಭೂಷಿತಾಂತಂ । ಪರಾರ್ಧ್ಯಕಾಲಾಗರುಚಂದನಾಕ್ತಂ ಸರಾವಣಾಂತಃಪುರಮಾವಿವೇಶ ॥೩೦॥

ಇತ್ಯಾರ್ಷೇ ಶ್ರೀಮದ್ರಾಮಾಯಣೇ ಸುಂದರಕಾಂಡೇ ಚತುರ್ಥಸ್ಸರ್ಗಃ

| ಪದಚ್ಛೇದ | ಅನ್ವಯ |
| --- | --- |
| ಸಹೇಮ, ಜಾಂಬೂನದ ಚಕ್ರವಾಳಂ, ಮಹಾರ್ಹಮುಕ್ತಾಮಣಿಭೂಷಿತಂ, ಪರಾರ್ಧ್ಯಕಾಲಾಗರುಚಂದನಾಕ್ತಂ, ಸಃ, ರಾವಣಾಂತಃಪುರಂ, ಆವಿವೇಶ ॥೩೦॥ | ಸಃ, ಜಾಂಬೂನದ ಚಕ್ರವಾಳಂ, ಮಹಾರ್ಹಮುಕ್ತಾಮಣಿಭೂಷಿತಂ, ಪರಾರ್ಧ್ಯಕಾಲಾಗರುಚಂದನಾಕ್ತಂ, ಸಹೇಮ, ರಾವಣಾಂತಃಪುರಂ, ಆವಿವೇಶ ॥೩೦॥ |

ಸಃ-ಆ ಮಾರುತಿಯು, ಜಾಂಬೂನದಚಕ್ರವಾಳಂ-ಸುವರ್ಣಮಯವಾದ ಮಂಡಲಾಕಾರದಕೋಟೆಯುಳ್ಳ, ಮಹಾರ್ಹಮುಕ್ತಾಮಣಿಭೂಷಿತಂ-ಅತ್ಯಂತಬೆಲೆಯುಳ್ಳಮುತ್ತಿನಮಣಿಗಳಿಂದ ಅಲಂಕರಿಸಲ್ಪಟ್ಟ, ಪರಾರ್ಧ್ಯಕಾಲಾಗರು ಚಂದನಾಕ್ತಂ-ಸರ್ವೋತ್ಕೃಷ್ಟವಾದ ಕೃಷ್ಣಾಗರು ರಸದಿಂದಲೂ ಶ್ರೀಗಂಧದಿಂದಲೂ ನೆನಸಲ್ಪಟ್ಟ, ಸಹೇಮ-ಸುವರ್ಣದಿಂದಯುಕ್ತವಾದ, ರಾವಣಾಂತಃಪುರಂ-ರಾವಣನ ಅಂತಃಪುರವನ್ನು, ಆವಿವೇಶ-ಪ್ರವೇಶಮಾಡಿದನು ॥೩೦॥

ತುಲ್ಯವಾಗಿಯೂ, ನಾನಾ ಗಜ ರಥ ತುರಗ ಪರಿವೃತವಾಗಿ ವಿಚಿತ್ರಭೂಷಣಭೂಷಿತವಾಗಿಯೂ, ಗೃಹದ್ವಾರದಲ್ಲಿ ಅಲಂಕಾರಕ್ಕೋಸ್ಕರ ಕಾಣಿಸಲ್ಪಟ್ಟ ಪಂಜರಬದ್ಧಗಳಾದ ಪಕ್ಷಿಗಳಿಂದಲೂ, ಬೋನುಗಳಲ್ಲಿರಿಸಲ್ಪಟ್ಟಿರುವ ಮೃಗಗಳಿಂದಲೂ ಯುಕ್ತವಾಗಿರುವ ಅತ್ಯಂತಕರಾಳರಾಗಿಯೂ, ಮಹಾಶೂರರಾಗಿಯೂ ಇರುವ ಅನೇಕ ಭಟರುಗಳಿಂದ ಸುರಕ್ಷಿತವಾಗಿಯೂ, ನಾನಾಕಡೆಗಳಲ್ಲೂ ಸಾವಿರಾರುಮಂದಿ ರಾಕ್ಷಸ ಸೈನ್ಯಗಳಿಂದ ಸುದೃಢವಾಗಿ ಪರಿಪಾಲಿಸಲ್ಪಟ್ಟದ್ದಾಗಿಯೂ ಇರುವ ಆ ಲಂಕಾಧೀಶನಾದ ರಾವಣಾಸುರನ ಭವನವನ್ನು ಪ್ರವೇಶಿಸುವನಾದನು ॥೨೭-೨೯॥

ಆ ಮಾರುತಿಯು ನಾನಾಕಡೆಯಲ್ಲೂ ಚಿನ್ನದಕೋಟೆಯಿಂದ ಸುತ್ತುವರಿಯಲ್ಪಟ್ಟದ್ದಾಗಿಯೂ, ದಿವ್ಯಗಳಾದ ಮುತ್ತುಗಳಿಂದ ಭೂಷಿತವಾಗಿಯೂ, ಅತ್ಯಂತ ಬೆಲೆಯುಳ್ಳ ಕೃಷ್ಣಾಗರು, ಅತ್ತರು, ಶ್ರೀಗಂಧ ಈರಸಗಳಿಂದ ಸಂಪೂರ್ಣವಾಗಿ ಸುವಾಸನೆಯುಳ್ಳದ್ದಾಗಿಯೂ ಇರುವ, ಬಂಗಾರದ ತಳಹದಿಮೆಟ್ಟಿರುವ, ಅತ್ಯಂತ ದೇದೀಪ್ಯಮಾನವಾಗಿರುವ ರಾವಣನ ಮಹಾಭವನದಲ್ಲೊಂದು ಭಾಗವಾದ ಅಂತಃಪುರಾಂಕಣವನ್ನು ಪ್ರವೇಶಮಾಡಿದನು ॥೩೦॥

ಸುಂದರಕಾಂಡಾರ್ಥಬೋಧಿನಿಯಲ್ಲಿ ನಾಲ್ಕನೆಯ ಸರ್ಗವು ಪರಿಸಮಾಪ್ತ.

## ಪಂಚಮಸ್ಸರ್ಗಃ ೫.

ಮೂ ॥ ತತಸ್ಸಮಧ್ಯಂಗತಮಂಶುಮಂತಂ ಜ್ಯೋತ್ಸ್ನಾವಿತಾನಂಮಹ ದುದ್ವಮಂತಂ । ದದರ್ಶಧೀಮಾನ್ ದಿವಿಭಾನುಮಂತಂ ಗೋಷ್ಠೇವೃಷಂ ಮತ್ತಮಿವಭ್ರಮಂತಂ ॥೧॥

| ಪದಚ್ಛೇದ | ಅನ್ವಯ |
| --- | --- |
| ತತಃ, ಸಃ, ಮಧ್ಯಂಗತಂ, ಅಂಶುಮಂತಂ, ಜ್ಯೋತ್ಸ್ನಾವಿತಾನಂ, ಮಹತ್, ಉದ್ವಮಂತಂ, ದದರ್ಶ, ಧೀಮಾನ್, ದಿವಿ, ಭಾನುಮಂತಂ ಗೋಷ್ಠೇ, ವೃಷಂ, ಮತ್ತಂ, ಇವ, ಭ್ರಮಂತಂ | ತತಃ ಧೀಮಾನ್ ಸಃ, ಮಧ್ಯಂಗತಂ, ಮಹತ್, ಜ್ಯೋತ್ಸ್ನಾವಿತಾನಂ ಉದ್ವಮಂತಂ, ದಿವಿ, ಭಾನುಮಂತಂ, ಗೋಷ್ಠೇ ಮತ್ತಂ, ವೃಷಭಮಿವಭ್ರಮಂತಂ, ಅಂಶುಮಂತಂ, ದದರ್ಶ ॥೧॥ |

ತತಃ- ಅನಂತರದಲ್ಲಿ, ಸಃ-ಆ ಮಾರುತಿಯು, ಮಧ್ಯಗತಂ-ಗಗನಮಧ್ಯವನ್ನು ಹೊಂದಿದ, ಮಹತ್-ಹೆಚ್ಚಾದ, ಜ್ಯೋತ್ಸ್ನಾವಿತಾನಂ- ಬೆಳದಿಂಗಳಸಮುದಾಯವನ್ನು, ಉದ್ವಮಂತಂ-ಹೊರಗೆಹೊರಡಿಸುತಲಿರುವ, ದಿವಿ-ಅಂತರಿಕ್ಷದಲ್ಲಿ, ಭಾನುಮಂತಂ-ಹೊಳೆಯುತ್ತಿರುವ, ಗೋಷ್ಠೇ-ಗೋಶಾಲೆಯಲ್ಲಿ, ಭ್ರಮಂತಂ-ಪರ್ಯಟನಮಾಡುತಲಿರುವ, ಮತ್ತಂ-ಮದಿಸಿರುವ, ವೃಷಭಮಿವಸ್ಥಿತಂ-ಯತ್ತಿನೋಪಾದಿಯಲ್ಲಿರುವ, ಅಂಶುಮಂತಂ-ಚಂದ್ರನನ್ನು, ದದರ್ಶ-ಕಂಡನು ॥೧॥

ಆ ಮಾರುತಿಯು ರಾವಣಾಂತಃಪುರವನ್ನು ಪ್ರವೇಶಮಾಡಿದ ಮುಹೂರ್ತದಲ್ಲಿ ಅತ್ಯುಜ್ವಲಕಾಂತಿಯುಕ್ತನಾಗಿಯೂ ಸರ್ವದಿಙ್ಮಂಡಲ ಪ್ರಕಾಶಕನಾಗಿಯೂ, ಗೊಶಾಲೆಗಳಲ್ಲಿ ಎತ್ತುಗಳು ಯಾವ ರೀತಿಯಲ್ಲಿ ವಕ್ರವಕ್ರವಾಗಿ ತಿರುಗುತ್ತಲಿವೆಯೋ ಆ ರೀತಿಯಲ್ಲಿ ವಕ್ರಗತಿಯುಳ್ಳವನಾಗಿಯೂ. ಅತಿಧವಳಕಾಂತಿಪುಂಜಯುಕ್ತನಾಗಿಯೂ ಇರುವ ಚಂದ್ರನನ್ನು ನೋಡಿದನು ॥೧॥

### ವೇದಾಂತಪರವಾದ ಗೂಢಾರ್ಥ.

ಈ ಬಳಿಯಲ್ಲಿ ಧೀಮಾನ್ ಎಂಬ ಶಬ್ದಸ್ವಾರಸ್ಯದಿಂದಲೂ, ಗೊಷ್ಠೇ, ಭ್ರಮಂತಂ, ವೃಷಂ, ಎಂಬಶಬ್ದಾವಳಿಗಳ ಸಂಬಂಧದಿಂದಲೂ ,, ಪರಾಂಚಿಖಾನಿವ್ಯತೃಣತ್ಸ್ವಯಂಭೂಸ್ತಸ್ಮಾತ್ಪರಾಙ್ಪಶ್ಯತಿನಾಂತರಾತ್ಮನ್ । ಕಶ್ಚಿದ್ಧೀರಃ ಪ್ರತ್ಯಗಾತ್ಮಾನ ಮೈಕ್ಷದಾವೃತ್ತಚಕ್ಷುರಮೃತತ್ವಮಿಚ್ಛನ್'' ಎಂಬ ಕಾಠಕೋಪನಿಷದ್ವಾಕ್ಯದ ಅರ್ಥಾನುಸಂಧಾನವು ಸೂಚಿತವಾಗುತ್ತದೆ. ಯಾವ ರೀತಿಯಲ್ಲಿ ಇಂದ್ರಿಯಗಳ ಆಕರ್ಷಣೆಯಿಂದ ಕಾಮ ಕ್ರೋಧ ಲೋಭ ಮೋಹ ಮದ ಮಾತ್ಸರ್ಯಗಳಿಂದ ಉಪಹತರಾಗಿ ಮದಾಂಧರಾಗಿ ಅಜ್ಞಾನವೆಂಬ ಕತ್ತಲೆಯಲ್ಲಿ ನಿಖಿಲ ಜೀವಕೋಟಿಗಳೂ ನುಳುಗುತ್ತಿರಲಾಗಿ ಸಮ್ಯ

ಮೂ॥ ಲೋಕಸ್ಯಪಾಪಾನಿವಿನಾಶಯಂತಂ ಮಹೋದಧಿಂಚಾಪಿ ಸಮೇಧಯಂತಂ । ಭೂತಾನಿಸರ್ವಾಣಿ ವಿರಾಜಯಂತಂ ದದರ್ಶಶೀತಾಂಶು ಮಥಾಭಿಯಾಂತಂ ॥೨॥

| ಪದಚ್ಛೇದ | ಅನ್ವಯ |
| --- | --- |
| ಲೋಕಸ್ಯ, ಪಾಪಾನಿ, ವಿನಾಶಯಂತಂ, ಮಹೋದಧಿಂ, ಚ, ಅಪಿ, ಸಮೇಧಯಂತಂ, ಭೂತಾನಿ, ಸರ್ವಾಣಿ, ವಿರಾಜಯಂತಂ, ದದರ್ಶ ಶೀತಾಂಶುಂ, ಅಥ, ಅಭಿಯಾಂತಂ ॥೨॥ | ಅಥ, ಸಃ, ಲೋಕಸ್ಯ, ಪಾಪಾನಿ, ವಿನಾಶಯಂತಂ, ಮಹೋದಧಿಂ, ಸಮೇಧಯಂತಂ, ಅಪಿಚ, ಸರ್ವಾಣಿ ಭೂತಾನಿ ವಿರಾಜಯಂತಂ, ಅಭಿಯಾಂತಂ, ಶೀತಾಂಶುಂ, ದದರ್ಶ ॥೨॥ |

ಅಥ-ಅನಂತರದಲ್ಲಿ, ಸಃ-ಆ ಮಾರುತಿಯು, ಲೋಕಸ್ಯ-ಜನಗಳ, ಪಾಪಾನಿ-ಪಾಪಕರ್ಮಗಳನ್ನು, ವಿನಾಶಯಂತಂ-ಹೋಗಲಾಡಿಸುತಲಿರುವ, ಮಹೋದಧಿಂ-ಮಹಾಸಮುದ್ರವನ್ನು, ಸಮೇಧಯಂತಂ-ವೃದ್ಧಿಹೊಂದಿಸುತಲಿರುವ, ಅಪಿಚ-ಮತ್ತು ಸರ್ವಾಣಿ ಭೂತಾನಿ-ಸಕಲಪ್ರಾಣಿಗಳನ್ನೂ, ವಿರಾಜಯಂತಂ-ಪ್ರಕಾಶಗೊಳಸುತಲಿರುವ, ಅಭಿಯಾಂತಂ-ಅಭಿಮುಖವಾಗಿಬರುತ್ತಲಿರುವ, ಶೀತಾಂಶುಂ-ಚಂದ್ರನನ್ನು, ದದರ್ಶ-ನೋಡಿದನು ॥೨॥

ಸರ್ವಪ್ರಾಣಿಗಳ ಪಾಪಗಳನ್ನೂ ನಿವಾರಣೆ ಮಾಡುವನಾಗಿಯೂ ಮಹಾ ಸಮುದ್ರವನ್ನು ಉಕ್ಕುವಂತೆ ಮಾಡುವನಾಗಿಯೂ, ಸಕಲಪ್ರಾಣಿಗಳನ್ನೂ ಆನಂದಗೊಳಿಸುವನಾಗಿಯೂ ಗಗನಮಂಡಲ ಮಧ್ಯದಲ್ಲಿ ತನಗೆ ಅಭಿಮುಖನಾಗಿ ಬರುತ್ತಿರುವ ಆ ಚಂದ್ರನನ್ನು ಮಾರುತಿಯು ಅತ್ಯಾದರದಿಂದ ಅವಲೋಕಿಸುವನಾದದು ॥೨॥

ವೇದಾಂತಪರವಾದ ಗೂಢಾರ್ಥ.

ಗ್ಯಾಜ್ಞಾನದಿಂದ ಪರಿಶುದ್ಧಾಂತಃಕರಣನಾದ ಒಬ್ಬಾನೊಬ್ಬ ಮಹಾಧೀರನು ಸರ್ವೇಂದ್ರಿಯಗಳನ್ನೂ ಸ್ವಾಧೀನಪಡಿಸಿಕೊಂಡು ಮೋಕ್ಷಾಪೇಕ್ಷೆಯಿಂದ ಕೂಡಿದವನಾಗಿ ತನ್ನ ಅನುಷ್ಠಾನ ಬಲದಿಂದ ಸರ್ವಜಗತ್ಪ್ರಕಾಶಕನಾದ ಆನಂದಮಯನಾದ ಅಮೃತಕಲಾಸ್ವಾಮಿಯಾದ ಆತ್ಮನೆಂಬ ಚಂದ್ರನನ್ನು ಸಾಕ್ಷಾತ್ಕರಿಸಿ ಆನಂದವೃತ್ತಿಯಲ್ಲಿರುತ್ತಾನೆಯೋ ಆ ಪ್ರಕಾರದಲ್ಲಿ ಬ್ರಹ್ಮಚರ್ಯವ್ರತನಿಷ್ಠನಾದ, ಜಿತೇಂದ್ರಿಯನಾದ ಆ ಮಾರುತಿಯು ಅರ್ಧರಾತ್ರಿಯಸಮಯದಲ್ಲಿ ಸರ್ವನಿಶಾಚರರೂ ಕಾಮ ಮೋಹಾದಿಗಳಿಂದ ಪೀಡಿತರಾಗಿರುವಾಗ್ಯೇ, ತಾನೊಬ್ಬನು ಪರಿಶುದ್ಧಾಂತಃಕರಣನಾಗಿ ಅಂತರಿಕ್ಷಗತನಾದ ಚಂದ್ರ ಕಿರಣ ಪ್ರಕಾಶದಿಂದ ಅಂಧಕಾರದ ಆವರಣವನ್ನು ತಪ್ಪಿಸಿಕೊಂಡು ಆನಂದ ತುಂದಿಲನಾಗಿದ್ದನು ॥೧॥

ಈ ಸ್ಥಳದಲ್ಲಿ “ ಭಿದ್ಯತೆ ಹೃದಯಗ್ರಂಥಿಶ್ಛಿದ್ಯಂತೆ ಸರ್ವಸಂಶಯಾಃ । ಕ್ಷೀಯಂತೆ ಚಾಸ್ಯಕರ್ಮಾಣಿ ತಸ್ಮಿನ್ ದೃಷ್ಟೇಪರಾವರೆ' ॥ ಎಂಬ ಮುಂಡಕೋಪನಿಷತ್ತಿನ ಮು

ಮೂ ॥ ಯಾಭಾತಿಲಕ್ಷ್ಮೀರ್ಭುವಿ ಮಂದರಸ್ಥಾ ತಥಾಪ್ರದೋಷೇಷುಚಸಾಗರಸ್ಥಾ । ತಥೈವತೋಯೇಷುಚ ಪುಷ್ಕರಸ್ಥಾರರಾಜಸಾ ಚಾರುನಿಶಾಕರಸ್ಥಾ ॥೩॥

| ಪದಚ್ಛೇದ | |
|---|---|
| ಯಾ, ಭಾತಿ, ಲಕ್ಷ್ಮೀಃ, ಭುವಿ, ಮಂದರಸ್ಥಾ, ತಥಾ, ಪ್ರದೋಷೇಷು, ಚ, ಸಾಗರಸ್ಥಾ, ತಥಾ, ಏವ, ತೋಯೇಷು, ಚ, ಪುಷ್ಕರಸ್ಥಾ, ರರಾಜ, ಸಾ, ಚಾರು, ನಿಶಾಕರಸ್ಥಾ ॥೩॥ | ಭುವಿ, ಮಂದರಸ್ಥಾ ಯಾ ಲಕ್ಷ್ಮೀಃ ಭಾತಿ, ತಥಾ ಪ್ರದೋಷೇಷು ಸಾಗರಸ್ಥಾಯಾಲಕ್ಷ್ಮೀಃ ಭಾತಿ, ತಥಾ ತೋಯೇಷು ಪುಷ್ಕರಸ್ಥಾಯಾ ಲಕ್ಷ್ಮೀಃ ಭಾತಿ, ನಿಶಾಕರಸ್ಥಾ, ಸಾ, ಚಾರು, ರರಾಜ ॥೩॥ |

ಭುವಿ-ಭೂಮಿಯಲ್ಲಿ, ಮಂದರಸ್ಥಾ-ಮಂದರಪರ್ವತದಲ್ಲಿರುವ, ಯಾಲಕ್ಷ್ಮೀಃ-ಯಾವಕಾಂತಿಯು ಭಾತಿ-ಪ್ರಕಾಶಿಸುತ್ತಲಿದೆಯೊ, ತಥಾ-ಹಾಗೆಯೇ, ಪ್ರದೋಷೇಷು-ಸಾಯಂಕಾಲಗಳಲ್ಲಿ, ಸಾಗರಸ್ಥಾ-ಸಮುದ್ರದಲ್ಲಿರುವ, ಯಾಲಕ್ಷ್ಮೀಃ-ಯಾವಕಾಂತಿಯು, ಭಾತಿ-ಪ್ರಕಾಶಿಸುತಲಿದೆಯೋ, ತಥಾ-ಹಾಗೆಯೇ, ತೋಯೇಷು-ಜಲಸ್ಥಾನಗಳಲ್ಲಿ, ಪುಷ್ಕರಸ್ಥಾ-ಕಮಲಗಳಲ್ಲಿರುವ, ಯಾಲಕ್ಷ್ಮೀಃ-ಯಾವಕಾಂತಿಯು, ಭಾತಿ-ಪ್ರಕಾಶಿಸುತಲಿದೆಯೊ, ನಿಶಾಕರಸ್ಥಾ-ಚಂದ್ರನಲ್ಲಿರುವ, ಸಾ-ಆ ಕಾಂತಿಯು, ಚಾರು-ಮನೋಹರವಾಗಿ, ರರಾಜ-ಪ್ರಕಾಶಿಸಿತು ॥೩॥

ಅಖಂಡವಾದ ಈ ಪೃಥ್ವೀಮಂಡಲದಲ್ಲಿ ಪರ್ವತೋತ್ತಮವಾದ ಮಂದರಾಚಲದಲ್ಲಿ ಯಾವಕಾಂತಿಯು ನಿಲಯವಾಗಿರುವದೋ ಆದರಂತೆಯೇ ಪ್ರದೋಷಕಾಲದಲ್ಲಿ ಕ್ಷೀರಸಾಗರದಲ್ಲಿ ಯಾವ ಕಾಂತಿಯಿರುವದೋ, ಮತ್ತು ಅತ್ಯುತ್ತಮಗಳಾದ ಸರೋವರಗಳಲ್ಲಿ ಉತ್ಪತ್ತಿಯನ್ನು ಹೊಂದಿರುವ ಕುಮುದ ಕಮಲಕೈರವಾದಿ ಪುಷ್ಪಲತೆಗಳಲ್ಲಿ ಯಾವ ಕಾಂತಿ ನೆಲೆಕೊಂಡಿರುವದೋ ಆ ಸರ್ವಕಾಂತಿಯೂ ರಾತ್ರಿಮಧ್ಯಭಾಗದಲ್ಲಿ ಶೀತಕಿರಣನಾದ ಚಂದ್ರನಲ್ಲಿ ಅನುವರ್ತಿಸುತಿತ್ತು ॥೩॥

### ವೇದಾಂತಪರವಾದ ಗೂಢಾರ್ಥ.

ಈ ಶ್ಲೋಕದ ಅರ್ಥಾನುಸಂಧಾನವು ಸೂಚಿತವಾಗಿದೆ—ಚಂದ್ರನು ಉದಯಿಸಿ ತನ್ನ ಕಿರಣಗಳನ್ನು ಸರ್ವತ್ರ ಪ್ರಸಾರಣ ಮಾಡುತ್ತಿರಲಾಗಿ ನಿಖಿಲ ಪ್ರಾಣಿಗಳಿಗೂ ಹೃದಯದ ದುಃಖವು ನಿವೃತ್ತವಾಗಿ ಆಹ್ಲಾದವು ಉಂಟಾಗುತ್ತದೆ. ಕತ್ತಲೆಯಲ್ಲಿ ಉಂಟಾಗಿದ್ದ ,, ಎದುರಿಗೆ ನಿಂತಿರುವದು ಮೋಟುಮರವೊ ಕಳ್ಳನೊ'' ಎಂಬ ಸಂಶಯ ವಿಪರ್ಯಗಳು ನಿವಾರಿತಗಳಾಗುತ್ತವೆ, ಕತ್ತಲೆಯಲ್ಲಿ ಕಣ್ಣು ಕಾಣದೆ ಇರುವ ಕಾರಣ ಕಾಲುಮುಂತಾದ್ದರಿಂದ ಸೂಕ್ಷ್ಮಪ್ರಾಣಿಗಳನ್ನು ಹಿಂಸಿಸಬಹುದಾದ ಪಾಪಕರ್ಮಗಳು ನಿವೃತ್ತಗಳಾಗುತ್ತವೆ ಇದೇ ರೀತಿಯಲ್ಲಿ ಪರಾತ್ಪರನಾದ ತೇಜೋಮಯನಾದ ಅಖಂಡ ಸಚ್ಚಿ,